# ಕರ್ನಾಟಕ ಲೋಚನ

ಷಾಣ್ಮಾಸಿಕ ವಿದ್ವತ್ ಪತ್ರಿಕೆ

ಸಂಪುಟ : ೨೩   ಜನವರಿ–ಡಿಸೆಂಬರ್ ೨೦೦೯   ಸಂಚಿಕೆ : ೦೧–೦೨

## ಡಾ. ವಿ.ಕೃ. ಗೋಕಾಕ್ ಶತಮಾನ ಸ್ಮರಣೆ

ಸಂಪಾದಕರು

ಪ್ರೊ॥ ಜಿ. ಅಬ್ದುಲ್ ಬಷೀರ್



ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ

ಎಂ.ವಿ.ಸೀ. ಸಂಶೋಧನ ಕೇಂದ್ರ

ಬಿ.ಎಂ.ಶ್ರೀ. ಕಲಾಭವನ (ರಿ.)

೩ನೇ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ, ಬೆಂಗಳೂರು–೧೯

ದೂರವಾಣಿ : ೨೬೬೧೫೮೭೭

# ಕರ್ನಾಟಕ ಲೋಚನ

**ಷಾಣ್ಮಾಸಿಕ ವಿದ್ವತ್ ಪತ್ರಿಕೆ**

ಸಂಪುಟ : ೨೩ ಜನವರಿ–ಡಿಸೆಂಬರ್ ೨೦೦೯ ಸಂಚಿಕೆ : ೦೧–೦೨

**ಡಾ. ವಿ.ಕೃ. ಗೋಕಾಕ್ ಶತಮಾನ ಸ್ಮರಣೆ**

ಸಂಪಾದಕರು

**ಪ್ರೊ. ಜಿ. ಅಬ್ದುಲ್ ಬಷೀರ್**




ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ ಕಲಾಭವನ
೩ನೆಯ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ, ಬೆಂಗಳೂರು – ೫೬೦೦೧೯.
ದೂರವಾಣಿ : ೨೬೬೧೫೮೭೭,೨೬೬೭೬೭೭೩,
ಇಮೇಲ್: bmsritrust@gmail.com

**KARNATAKA LOCHANA** - (Half yearly Research Journal) Editor: Prof. G. Abdul Basheer, Published by B.M.Sri. Smaraka Prathistana, M.V.Si. Reseach Center, B.M.Sri. Kalabhavan, 3rd Main Road, Narasimharaja Colony, Bangalore - 560 019. Ph.No. 080-26615877, 26676773

Pages: iv + 90

Year : January-June 2009 (Vol. 23, No. 01)

Yearly Subscription: **Rs. 100/-** (for Libraries)

For Indivigual : **Rs. 50/-**

Singal issue: **Rs. 30/-**

ವಾರ್ಷಿಕ ಚಂದಾ : ರೂ. ೧೦೦/- (ಗ್ರಂಥಾಲಯಗಳಿಗೆ)
ಪ್ರತಿಷ್ಠಾನದ ಆಜೀವ ಸದಸ್ಯತ್ವ : ರೂ. ೫೦೦/-



ಮುದ್ರಣ
ಇಳಾ ಮುದ್ರಣ
ನಂ. ೩೬, ೪೦ ಅಡಿ ರಸ್ತೆ
ರಾಘವನಗರ, ನ್ಯೂ ಟಿಂಬರ್‌ಯಾರ್ಡ್ ಲೇಔಟ್
ಬೆಂಗಳೂರು - ೫೬೦ ೦೨೬
ದೂರವಾಣಿ : ೨೬೭೫೭೧೫೯

## ಸಂಪಾದಕೀಯ

ಈ ವರ್ಷ ಡಾ. ವಿ.ಕೃ. ಗೋಕಾಕ್ ಅವರ ಜನ್ಮಶತಮಾನೋತ್ಸವ ವರ್ಷವಾಗಿರುವುದರಿಂದ ಈ ಸಂಯುಕ್ತ ಸಂಚಿಕೆಯನ್ನು ಅವರ ಸ್ಮರಣೆಯಲ್ಲಿ ಹೆಸರಿಸಲಾಗಿದೆ. ಗೋಕಾಕ್ ಅವರು ಕವಿಯಾಗಿ, ಕಾದಂಬರಿಕಾರರಾಗಿ, ವಿಮರ್ಶಕರಾಗಿ, ಖ್ಯಾತನಾಮರಾಗಿದ್ದಾರೆ; ಕನ್ನಡ ಸಾಹಿತ್ಯಕ್ಕೆ ಅವರ ಕೊಡುಗೆ ಅಪಾರವಾದದ್ದು. ಸಂಸ್ಕೃತ, ಇಂಗ್ಲೀಷ್, ಕನ್ನಡ ಭಾಷೆಗಳಲ್ಲಿ ಪರಿಣತಿ ಪಡೆದಿದ್ದ ಅವರು ಶ್ರೇಷ್ಠ ಸಾಹಿತಿಚಿಂತಕರಲ್ಲಿ ಒಬ್ಬರಾಗಿದ್ದರು. 'ಭಾರತ ಸಿಂಧುರಶ್ಮಿ' ಎಂಬ ಅವರ ಮಹಾಕಾವ್ಯ ಹೊಸಗನ್ನಡದ ಒಂದು ಅನನ್ಯ ಮಹಾಕಾವ್ಯವಾಗಿದೆ. 'ಸಮುದ್ರ ಗೀತೆಗಳು' ಹೊಸಗನ್ನಡ ಸಾಹಿತ್ಯಕ್ಕೆ ಅವರು ನೀಡಿದ ಅಪೂರ್ವ ಕೊಡುಗೆಯಾಗಿದೆ.

ಗೋಕಾಕ್ ಅವರ ಹೆಸರು ಕರ್ನಾಟಕದಲ್ಲಿ ಚಿರಸ್ಥಾಯಿಯಾಗಿ ಉಳಿಯಲು ಮುಖ್ಯಕಾರಣ 'ಗೋಕಾಕ್ ವರದಿ'. ಕರ್ನಾಟಕದಲ್ಲಿ ಕನ್ನಡದ ಸ್ಥಾನ–ಮಾನಗಳನ್ನು ಕುರಿತು ಅವರು ನೀಡಿದ ವರದಿ ರಾಜಕೀಯ ಕ್ಷೇತ್ರದಲ್ಲಿ ತಲ್ಲಣವನ್ನುಂಟುಮಾಡಿತು. ಈ ಮಹಾಶಯರ ಶತಮಾನೋತ್ಸವ ಕಾರ್ಯಕ್ರಮಗಳನ್ನು ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ 'ಕನ್ನಡ ಗೆಳೆಯರ ಬಳಗ'ದ ಸಹಯೋಗದೊಂದಿಗೆ ಅರ್ಥಪೂರ್ಣವಾಗಿ ನಡೆಸಿತು. ಪ್ರಸ್ತುತ ಸಂಚಿಕೆಯಲ್ಲಿ ಶ್ರೀಯುತರನ್ನು ಕುರಿತ ಎರಡು ಲೇಖನಗಳನ್ನು ಶತಮಾನೋತ್ಸವ ಸ್ಮರಣೆಗಾಗಿ ಪ್ರಕಟಿಸಲಾಗಿದೆ. ಪ್ರೊ. ಕೆ.ಎಸ್. ನಿಸಾರ್‌ಅಹಮದ್ ಅವರ ಲೇಖನ ಗೋಕಾಕ್ ಅವರ ವ್ಯಕ್ತಿತ್ವ ಹಾಗೂ ಸಾಹಿತ್ಯವನ್ನು ಸಮಗ್ರವಾಗಿ ಚಿತ್ರಿಸಿದೆ.

ಕರ್ನಾಟಕದ ಪ್ರಸ್ತುತ ರಾಜಕೀಯ ಚದುರಂಗದಾಟದಲ್ಲಿ ಕನ್ನಡ ಭಾಷೆಯನ್ನು ಕೇಳುವವರೇ ಇಲ್ಲದಂತಾಗಿದೆ. ಕನ್ನಡಕ್ಕಾಗಿ ಇನ್ನೂ ಹೋರಾಡಬೇಕಾದ ಪರಿಸ್ಥಿತಿ ಇರುವುದು ಶೋಚನೀಯ ಸಂಗತಿಯಾಗಿದೆ; ನಾಚಿಕೆಗೇಡಿನ ಸಂಗತಿಯಾಗಿದೆ. ಪ್ರತಿಯೊಂದನ್ನೂ ಕನ್ನಡಿಗರು ಹೋರಾಡಿ ಪಡೆಯಬೇಕಾಗಿ ಬಂದಿರುವುದು ಕನ್ನಡಿಗರ ದುರ್ದೈವವಾಗಿದೆ. ಶಾಸ್ತ್ರೀಯ ಸ್ಥಾನಮಾನ, ಕನ್ನಡ ಮಾಧ್ಯಮದ ವಿಚಾರ, ನದಿ ನೀರಿನ ಹಂಚಿಕೆ, ಗಡಿ ವಿಚಾರ ಹೀಗೆ ಹಲವು ಹತ್ತು ಸಂಗತಿಗಳನ್ನು ಉದಾಹರಿಸಬಹುದು. ರಾಜಕೀಯ ಪಕ್ಷಗಳಿಗೆ ನಾಡುನುಡಿಯ ಚಿಂತನೆಗಿಂತ ಹೆಚ್ಚಾಗಿ ಸ್ವಹಿತಾಸಕ್ತಿಯ ಚಿಂತನೆಯೇ ಮುಖ್ಯವಾಗಿದೆ ಎಂಬುದು ಆಗಾಗ ಸಾಬೀತಾಗುತ್ತಾ ಬಂದಿದೆ.

ಈ ಸಂಚಿಕೆಯಲ್ಲಿ ಗ್ರಂಥ ವಿಮರ್ಶೆಗಳೂ ಇವೆ; ಜೊತೆಗೆ ಕೆಲವು ಅಪೂರ್ವ ಲೇಖನಗಳೂ ಇವೆ. ಲೇಖನಗಳನ್ನು ಕಳುಹಿಸಿ ಉಪಕರಿಸಿದ ಸಾಹಿತಿ ವಿದ್ವಾಂಸರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳು ಸಲ್ಲುತ್ತವೆ.

ಸಂಪಾದಕರು

**ಪ್ರೊ. ಜಿ. ಅಬ್ದುಲ್ ಬಷೀರ್**

# ಪರಿವಿಡಿ

# ೧. ವಿಕ್ರಮಾರ್ಜುನ ವಿಜಯದ ಕೆಲವು ಶಬ್ದಾರ್ಥಗಳು

■ ಡಾ. ಉಪ್ಪಂಗಳ ಶಂಕರನಾರಾಯಣ ಭಟ್

ಪಂಪನ ಕೃತಿದ್ವಯಗಳು ಹಲವು ವಿಚಾರಗಳ ದೃಷ್ಟಿಯಿಂದ ಸಂಶೋಧನೆಗೆ ಆಕರವಾಗಬಲ್ಲದು. ಈಗಾಗಲೇ ಹಲವು ಜನ ವಿದ್ವಾಂಸರು ಪಂಪನ ಕುರಿತಾಗಿ ಸಂಶೋಧನೆ ಮಾಡಿದ್ದರೂ ಅವುಗಳಂತೂ ಇನ್ನೂ ಬರಿದಾಗದ ಕಣಜಗಳಾಗಿಯೇ ಉಳಿದಿವೆ. ಸಾವಿರ ವರ್ಷ ಕಳೆದರೂ ಪಂಪನ ಕೆಲವೊಂದು ದೇಸೀ ಶಬ್ದ ಪ್ರಯೋಗಗಳು ಅರ್ಥವಾಗದೇ ಇವೆ; ಕೆಲವೊಂದು ಪದಗಳು ಅಂದಿನ ಅರ್ಥದಲ್ಲಿಯೇ ಇಂದೂ ಪ್ರಾಯೋಗಿಸಲ್ಪಡುತ್ತವೆ. ಮುಖ್ಯವಾಗಿ ಕರಾವಳಿಯಲ್ಲಿ ಹಳಗನ್ನಡ ಮಿಶ್ರಿತವಾದ ಕನ್ನಡ ಮನೆಮಾತಾಗಿರುವ ಹವ್ಯಕರಲ್ಲಿ ಇವು ಗೋಚರವಾಗುತ್ತವೆ. ಪಂಪನ ಶಬ್ದಗಳ ಅರ್ಥಗೌರವವು ಊಹಾತೀತವಾದುದು. ಮುಳಿಯ ತಿಮ್ಮಪ್ಪಯ್ಯನವರ 'ನಾಡೋಜ ಪಂಪ'ದಲ್ಲಿ ಇಲ್ಲದ ಮತ್ತು ಡಿ.ಎಲ್.ಎನ್. ಅವರ 'ದೀಪಿಕೆ'ಯಲ್ಲಿ ಸ್ಪಷ್ಟೀಕರಿಸಲಾಗದ ಕೆಲವೊಂದು ಶಬ್ದಗಳ ಅರ್ಥವನ್ನು ಹುಡುಕುವ ಪ್ರಯತ್ನವನ್ನಿಲ್ಲಿ ಮಾಡಲಾಗಿದೆ.

೧. ಲವಣ ಜಳಧಿ ಬಳಸಿದಂತೆ ಬಳಸಿದಗಟಿ ನೀಳದಿಂದುದಗ್ರ ಕನಕಶಾಳದಿಂ (೧-೫೮)ಈಂಟು ಜಳಧಿಯೆನಿಪಗಟಿ ನೀಳ್ಪಿನಿಂ (೩-೨೨), ಲವಣಾಬ್ಧಿಯೆ ಬಳಸಿದುದೆನಿಸುವಗಟಿ ಬಳಸೆಸೆದಿರೆ (೪-೧೦). 'ಅಗಟಿ' ಪದಕ್ಕೆ ದೀಪಿಕೆಯಲ್ಲಿ ಅರ್ಥಕೊಟ್ಟಿಲ್ಲ; ಕಿಟ್ಟೆಲ್ ಕೋಶದ ಪರಿಷ್ಕೃತ ಆವೃತ್ತಿಯಲ್ಲಿ ಅಗಟಿ, ಅಗಟು (ಪು. ೧೨)
what has been dug etc ಎಂದು ಹೇಳಿ ಪಂಪನ ಎರಡನೆಯ ಪ್ರಯೋಗವನ್ನು ಉದ್ಧರಿಸಿದೆ. ಕ.ಸಾ.ಪ. ಕನ್ನಡ ನಿಘಂಟುವಿನಲ್ಲಿ (ಪು. ೭೪) ಅಗಳು = ದಂಡೆ; ದರೆ ಎಂದು ಅರ್ಥಕೊಟ್ಟಿರುತ್ತದೆ.

ನಮ್ಮೀ ಪ್ರದೇಶದಲ್ಲಿ 'ಅಗಟ್', 'ಅಗಳು' ಎಂದಾಗಿ ಈಗಲೂ ಪ್ರಯೋಗದಲ್ಲಿದೆ. ಗುಡ್ಡೆ ಪ್ರದೇಶಗಳಲ್ಲಿ ಒಂದು ಭಾಗದಲ್ಲಿರುವ ಮಣ್ಣನ್ನು ತೆಗೆದು ಮತ್ತೊಂದು ಭಾಗಕ್ಕೆ ಉತ್ತರೆತ್ತರವಾಗಿ ಅಗಲಕ್ಕೆ ಹಾಕುತ್ತಾ ಮಾಡುವ ದರೆ; ಅಥವಾ ಮಣ್ಣಿನಿಂದ ಮಾಡಿದಕೋಟೆ. ಇಂದು ಮಣ್ಣಿನ ಬದಲಿಗೆ ಮುರಕಲ್ಲಿನಿಂದ ಕೋಟೆ ಕಟ್ಟಿದರೂ 'ಅಗಳು' ಎಂದೇ ಕರೆಯುವ ರೂಢಿಯಿದೆ.

ಉದಗ್ರ ತನಕ ಶಾಳದಿಂ – ಎತ್ತರವಾದ ಚಿನ್ನದ ಕೋಟೆಯ ಗೋಡೆಯಿಂದ ಎಂದು ದೀಪಿಕೆಯಲ್ಲಿ ಅರ್ಥೈಸಿದೆ. ಆದರೆ ಎತ್ತರವಾಗಿ ಬೆಳೆದಿರುವ ಹೊಂಬಣ್ಣದ ಪೈರಿನಿಂದ ಕಂಗೊಳಿಸುವ ಶಾಳ – ಗಂಧಶಾಲಿ ಭತ್ತದ ಗದ್ದೆಗಳೆಂದು ಇರಬಹುದೇ? ತುಳುವಿನಲ್ಲಿ ಅಗಳ್ – ಅಗರ್ – ದರೆ. (ತುಳು ನಿಘಂಟು – ರಾ.ಗೋ.ಪೈ. ಸಂಶೋಧನ – ಕೇಂದ್ರ ಪುಟ. ೪೦)

೨. **ತೊಱೆಯ ತಡಿಯೊಳೋಡಮಂ ನಡೆಯಿಸುವ – (೧–೬೭)**

ಓಡ –ದೋಣಿ ಎಂದು ದೀಪಿಕೆ. ಕರಾವಳಿ ಪ್ರದೇಶದಲ್ಲಿ ಇಂದೂ ಕೂಡ ದೋಣಿಗೆ ಓಡ ಎಂದೇ ಕರೆಯುತ್ತಾರೆ. ತುಳುವಿನಲ್ಲೂ ಇದೇ ಅರ್ಥವಿದೆ. ತುಳು ನಿಘಂಟುವಿನಲ್ಲಿ Boat shaped (ಪು. ೫೫೯) ಎಂದು ಹೇಳಿದೆ.

೩. **ಮೃಗಯಾ ವ್ಯಾಜದಿ ........ಪಳಂಚಲ್ಕೆ (೧ – ೭೦)**

––ನೀರ್ ಮೊಗದುಂ ಪಳಂಚೆ (೫ – ೬೪)

ಪಳಂಚಿದ ಬಣ್ಣಂಗಳುಮೆಸೆಯೆ (೫ – ೬೬ರ ವಚನ) ಮತ್ತು ಇತರ ಪ್ರಯೋಗಗಳು. ಪಳಂಚು – ದೀಪಿಕೆಯಲ್ಲಿ ಅರ್ಥವಿಲ್ಲ. ಪರಿಷ್ಕೃತ ಕಿಟ್ಟೆಲ್ ಕೋಶದಲ್ಲಿ – ಪಳಂಚು – ಪಳಚು – ಹಳಚು to strike against, to touch ಎಂದು ಹೇಳಿ – ಘನ ಪಥಮಂ ಪಳಂಚಲೆವ ಸೌಧಚಯಂಗಳಿಂ ಆಡುತಿರ್ಪ (ಪಂ.ಭಾ. ೪–೫) ಮತ್ತು ನಾಗಚಂದ್ರನ ೧೨–೧೧; ೧೬–೪೨ರ ಪದ್ಯವನ್ನು ಉದಾಹರಿಸಿದೆ. ಕ.ಸಾ.ಪ. ನಿಘಂಟು (ಪು. ೫೪೪೭)ವಿನಲ್ಲಿ ಪಳಂಚಲೆ ತಾನು; ಅಪ್ಪಳಿಸು, ಬಡಿ ಎಂದು ಅರ್ಥೈಸಿದೆ.

ನಮ್ಮಲ್ಲಿ ತಲೆ; ಮೈಗೆ ಎಣ್ಣೆಹಚ್ಚಿಕೊಳ್ಳುವಾಗ (ಎಣ್ಣೆ ಹಾಕಿದಸ್ನಾನ) ಒಂದು ಪ್ರಮಾಣವನ್ನು ಮೀರಿ ಎಣ್ಣೆ ಹಚ್ಚಿಕೊಂಡರೆ 'ಎಣ್ಣೆ ಪಳಂಚುವುದು' ಎನ್ನುತ್ತೇವೆ. ಪಂಪಭಾರತದ (೧–೭೦)ರ ಪದ್ಯಕ್ಕೆ 'ತಾಗುವು'ದೆಂದಷ್ಟೇ ಅರ್ಥೈಯಿಸಿದರೆ ಸಾಲದು! ತನ್ನ್ಯಗ ಶಾಬಾಕ್ಷಿಯ ಕಂಪು ಪಳಂಚಲ್ಕೆ – ಮೃಗನೇತ್ರೆಯ ಪರಿಮಳ ಎಷ್ಟರಮಟ್ಟಿಗೆ ಶಂತನುವಿನ ಮನಸ್ಸನ್ನು ಆವರಿಸಿದೆ ಎಂಬುದನ್ನು ಕಲ್ಪಿಸಿಯೇ ತಿಳಿದುಕೊಳ್ಳಬೇಕು. ಅಂತೆಯೇ ಸೌಧಚಯಂಗಳೆಷ್ಟಿತ್ತೆಂಬುದನ್ನು ಊಹಿಸಿದಾಗಲೇ ಅಲ್ಲಿನ ಸೌಭಾಗ್ಯ ತಿಳಿಯುವುದು. ಪಂಪನ ಶಬ್ದಶಕ್ತಿ; ಪದದ ಔಚಿತ್ಯ ಅದ್ಭುತವಾದುದು.

**೪. ನೀಡಿರದೀವುದೀ .......ಮೊಱೆಯೆಲ್ತೆಗಂತದು (೧–೭೩)**

ದೀಪಿಕೆಯಲ್ಲಿ 'ಮೊಱೆಯಲ್ತು' – ಸಂಬಂಧವಿಲ್ಲ ಎಂದಿದೆ. ಇದೇ ಅರ್ಥವನ್ನು ಕಿಟ್ಟೆಲ್ ಕೋಶದಲ್ಲಿ (ಪು. ೧೩೮೪) ಕೊಟ್ಟಿದೆ. 'ಮೊಱೆಯಂ ಮಱೆಯಿಪ್ಪುದು' (೨–೪೯) ಈ ಅರ್ಥದಲ್ಲಿಯೇ ಇದೆ. ಆದಿಪುರಾಣದ (೨–೧೧)ರ 'ಮೊಱೆಯಿಲ್ಲಱನಿಲ್ಲ' – ಅಂತೆಯೇ ಸರಿ. ಕ.ಸಾ.ಪ. ಕೋಶದಲ್ಲಿ (ಪು. ೭೪೭೩) ಈ ಅರ್ಥವೇ ಇದ್ದು ರಕ್ತಸಂಬಂಧ ಅಥವಾ ವಿವಾಹದಿಂದ ಉಂಟಾದ – ಹೆಚ್ಚುವರಿ ಅರ್ಥವನ್ನು ಕೊಟ್ಟಿದೆ. 'ಮೊಱೆ' ಎಂಬ ಪದವು ಈಗ ನಮ್ಮಲ್ಲಿ 'ಮರೆ' ಎಂದಾಗಿದೆ. ವಿವಾಹಸಂಬಂಧವನ್ನು ಏರ್ಪಡಿಸುವ ಸಂದರ್ಭದಲ್ಲಿ ಸಗೋತ್ರದವರ ಕುರಿತಾಗಿ 'ಆಸಂಬಂಧ ಮರೆಯಲ್ಲಿ ಆಗದು' ಎಂಬುದಾಗಿ ಇಂದೂ ಹೇಳುವುದಿದೆ.

**೫. ಪಿಡಿಲವೊಲೆಱಗುವ ............ಉಮ್ಮಳದಿಂ ಉಂಡೆಡೆಯೊಳ್ (೧–೩೭)**

'ಉಮ್ಮಳ'ಕ್ಕೆ ದೀಪಿಕೆಯಲ್ಲಿ ವ್ಯಾಕುಲತೆ ಎಂದು ಅರ್ಥಕೊಟ್ಟಿದೆ. ನಮ್ಮಲ್ಲಿ 'ಉಮ್ಮಳ' ಎಂದರೆ 'ಸೊಕ್ಕು' ಎಂದರ್ಥವಿದೆ. ಆತನಿಗೆ ಉಂಡ ಉಮ್ಮಳ –ಊಟಮಾಡಿದ ಸೊಕ್ಕು ಅಥವಾ 'ಹಣದ ಉಮ್ಮಳ' – ಸಂಪತ್ತಿನ ಸೊಕ್ಕು ಎಂಬರ್ಥದಲ್ಲಿ ಪ್ರಯೋಗವಾಗುವುದಿದೆ.

**೬. ಅತ್ತಸುರೇಶ್ವರ — ಈಗಳಬ್ಬೆಯೆಂದು — (೧–೩೫)**

ಎಂದು ಪುರಂದರನರಸಿಯ — ದಲೆನಗಬ್ಬೆಯೇ (೮–೨೯)

— ಅಬ್ಬೇಂ ವಂದಿರ್ಪುದದೆನಗೆ — (೯–೭೯)

— ಈ ಯೊಡಲಬ್ಬೆ ಪೇಟಿಮೆನಗೇಂ ಕಲ್ಪಾಂತರ ಸ್ಥಾಯಿಯೇ (೯–೮೪)

ದೀಪಿಕೆಯಲ್ಲಿ 'ಅಬ್ಬೆ'ಗೆ ತಾಯಿ ಎಂದು ಅರ್ಥಕೊಟ್ಟಿದೆ. ಹಳೆಗನ್ನಡ ಕಾವ್ಯಗಳಲ್ಲಿ 'ತಾಯಿ'ಗೆ ಅಬ್ಬೆಯೆಂದೇ ಪ್ರಯೋಗ. ಇಂದೂ ಹವ್ಯರರಲ್ಲಿ ತಾಯಿಯನ್ನು ಅಬ್ಬೆಯೆಂದೇ ಸಂಬೋಧಿಸುವುದು ವಾಡಿಕೆ. ಆದರೆ ಆಧುನಿಕ ನಾಗರಿಕತೆಯಿಂದ 'ಅಬ್ಬೆ' ಶಬ್ದದ ಬದಲು 'ಅಮ್ಮ' ಪದವು ಆಕ್ರಮಿಸುತ್ತಿರುವುದು ಬೇಸರದ ಸಂಗತಿ. ಸ್ತ್ರೀಯರನ್ನು 'ಅಮ್ಮ' ಎಂದು ಯಾರು ಕರೆದರೂ ಅಡ್ಡಿಯಿಲ್ಲ; ಆದರೆ 'ಅಬ್ಬೆ' ಎಂದು ಹೆತ್ತತಾಯನ್ನು ಮಾತ್ರ ಸಂಬೋಧಿಸಲು ಸಾಧ್ಯ. 'ಅಬ್ಬೆ' ಶಬ್ದಕ್ಕಿರುವ ಆತ್ಮೀಯತೆ ಅರ್ಥಗೌರವ; 'ಅಮ್ಮ'ನಿಗಿಲ್ಲ.

**೭. ಪಾಂಡುರಾಜನನೆ ಕುಂತಿ ಮನಂಬುಗೆ ಮಾಲೆ ಸೂಡಿದಳ್ (೧–೧೦೬)**

—ಗುಣಾರ್ಣವನಂ ಸತಿ ಮಾಲೆ ಸೂಡಿದಳ್ (೩–೬೪)

ದೀಪಿಕೆಯಲ್ಲಿ 'ಸೂಡಿದಳ್' – ಮುಡಿಸಿದಳು ಎಂದು ಅರ್ಥಕೊಟ್ಟಿದೆ. ನಮ್ಮಲ್ಲಿ ಇಂದೂ 'ಅವಳು ಮಾಲೆಯನ್ನು ಸೂಡಿದಳು' – ಮಾಲೆಯನ್ನು ಮುಡಿದಳು ಎಂಬರ್ಥದಲ್ಲಿ ಪ್ರಯೋಗದಲ್ಲಿದೆ.

೮. ದಾಶರಾಜನಲ್ಲಿಗೆ ಕೂಸಂ ಬೇಡೆ ಪೆರ್ಗಡೆಗಳನಟ್ಟಿದೊಡೆ (೧-೭೦ ರ ವಚನ)

—ಗರ್ಭದ ಕೂಸಿನ ಬಳೆದಳವಿಯಳವನಳೆದವರುಮೊಳರೇ ( ೧-೧೨೬)

—ಗಾಂಗೇಯನಯ್ವರ್ ಕೂಸುಗಳುಮಂ ತನ್ನತೊಡೆಯೆ — (೨-೨೯ರ ವಚನ) ಮತ್ತು ೨-೨೮ರ ವಚನ. ಬಿಡೆಯಂ ಕೂಸಿಂಗೆ (೫-೨೨) ಮತ್ತು ಇತರ ಪ್ರಯೋಗಗಳು.

ಪಂಪನಲ್ಲಿ 'ಕೂಸು' ಪದವು 'ಹೆಣ್ಣು ಮಗು' ಮತ್ತು 'ಮಗು' ಎಂಬೆರಡು ಅರ್ಥಗಳಲ್ಲಿಯೂ ಬಳಕೆಯಾದಂತಿದೆ. 'ಕೂಸಂ ಬೇಡೆ' – ಕನ್ನೆಯನ್ನು ಬೇಡುವುದು. ೨-೩೦ರ ವಚನದಲ್ಲಿ 'ಕೂಸುಗಳ್ ಕೂಸಾಟ ವಾಡುತ್ತಿರ್ದೊಂದು ದಿವಸಂ' - ಮಕ್ಕಳ ಮಕ್ಕಳಾಟ ಎಂದರ್ಥ. ೩-೨೫ರ ವಚನದಲ್ಲಿ - ಪೆಂಡತಿಯು ನೀವೆನಪ್ಪೊದಾಕೆಯಿಂ ಬಟಿಯಿಮಿೂ ಕೂಸುಗಳಂ ನಡಪುವರಿಲ್ಲ ಮಗಳ ನೀವೆನಪ್ಪೊಡೆ ಕೊಡಗೂಸೆಂಬುದು ಪೆಜರೊಡವೆ-ಕೊಡಗೂಸು ದೀಪಿಕೆಯಲ್ಲಿ – ಕುಡಲಾದ ಕೂಸು – ಕೊಡಗೂಸು – ಕುಡಗೂಸು ಎಂಬ ರೂಪವಿರಬೇಕು; ಕೊಡ ಎಂಬುದು ಕೋಮಲವಾದ, ಎಳೆಯ ಎಂಬರ್ಥವುಳ್ಳ ಶಬ್ದ ಎಂದಿದೆ. ಇಲ್ಲಿ ವ್ಯಾಕರಣ ಏನು ಇದ್ದರೂ ಕೊಡಲಿರುವ ಕೂಸು, ಕೊಡದ ಕೂಸು, ಮದುವೆಯಾಗಲಿರುವ ಹೆಣ್ಣು; ಮದುವೆಯಾಗದ ಹೆಣ್ಣು ಎಂದು ಅರ್ಥೈಸಬಹುದೇ? ನಮ್ಮಲ್ಲಿ ಇಂದೂ ಮದುವೆಯಾಗಲಿರುವ ಹೆಣ್ಣಿಗೆ 'ಕೊಡಗೂಸು' ಎಂದೇ ಹೇಳುತ್ತಾರೆ.

೯. **—ಪ್ರೇತಮನೋಗಡಿಸದೆ ಸುಡುವುದು — (೨-೨೮)**

'ಒಗಡಿಸು' – ಅಸಹ್ಯಪಟ್ಟುಕೊಳ್ಳು ಎಂದು ದೀಪಿಕೆ. ಭೀಭತ್ಸವನ್ನು ಕಂಡಾಗ, ದುರ್ನಾತದಿಂದ ವಾಂತಿಬರುವಂತೆ ಮಾಡುವ ಕ್ರಿಯೆಯನ್ನು 'ಒಗಡಿಸು' ಎಂದು ಇಂದೂ ಹೇಳುತ್ತಾರೆ.

೧೦. **—ಈಗಳೊಂದಡಕೆಯುಮಿಲ್ಲ – (೨-೪೬)**

'ಅಡಕೆ' ಎಂಬ ಪದವು ಈ 'ಅಡಿಕೆ' ಎಂದು ಬಳಕೆಯಾಗುತ್ತದೆ. 'ಅವನಲ್ಲಿ ಒಂದು ಅಡಿಕೆಯೂ ಇಲ್ಲ ಎಂದರೆ ಕನಿಷ್ಠ ಸಂಪತ್ತೂ ಇಲ್ಲದವ ಎಂದರ್ಥ.

೧೧. **ತನ್ನ ತಂಗೆ ಹಿಡಿಂಬೆಯೆಂಬಳಂ ಕರೆದು – (೩-೧೧ರ ವಚನ)**

ತಂಗೆಯ ಮಾಣ್ದುದರ್ಕವಂ ಮೊಟಗಿ (೩-೧೬)

ಆಗಳ್ ನಾರಾಯಣನ ತಂಗೆ ಸುಭದ್ರೆಯೆಂಬ ಕನ್ನೆ (೪ - ೩೯ರ ವಚನ)

ಕಿರಿಯ ಸಹೋದರಿಯನ್ನು ಸಂಬಂಧವಾಚಕವಾಗಿ ಅಲ್ಲದೆ 'ತಂಗೇ' ಎಂದು ಸಂಬೋಧಿಸುವ ರೂಢಿ ಈಗಲೂ ಇದೆ.

೧೨. **ಕತ್ತುರಿಯ ಸಗಣನೀರ್ ಬಿಡು ! ಮುತ್ತಿನ ರಂಗವಲಿ — (೩-೨)**

ದೀಪಿಕೆಯಲ್ಲಿ ಕಸ್ತೂರಿಯನ್ನು ಕದಡಿ ಮಾಡಿದ ಸೆಗಣಿಯ ನೀರು ಎಂದಿದೆ. 'ಸಗಣ' ಎಂದರೆ ಗೋಮಯ; ಇದನ್ನು ಸೆಗಣಿ, ಸೆಗಣ ಎಂದೂ ಹೇಳುತ್ತಾರೆ. ಸೆಗಣಿಯೊಡನೆ

ಕಸ್ತೂರಿಯನ್ನು ಬೆರಸುವುದು ಏಕೆ? ಸೆಗಣಿಯ ನೀರನ್ನು ಸಾರಿಸಿ ಭೂಮಿಯನ್ನು ಶುದ್ಧಗೊಳಿಸುವ ಪದ್ಧತಿ ಇದೆ; ಆದರೂ ಸೆಗಣಿಗೆ ಒಂದು ಘಾಟು ವಾಸನೆ ಇದೆ. ಪ್ರಾಯಃ ಅದನ್ನು ಕಡಿಮೆಗೊಳಿಸುವುದಕ್ಕಾಗಿ ಕಸ್ತೂರಿಯನ್ನು ಮಿಶ್ರಗೊಳಿಸುತ್ತಿರಬಹುದೇ? ಇಲ್ಲವಾದಲ್ಲಿ 'ಸಗಣ' ವೆಂದರೆ 'ಕದಡಿದ' ಎಂದು ಅರ್ಥಪಿರಬೇಕು. ಆಗ 'ಕತ್ತುರಿಯನ್ನು ಕದಡಿದ ನೀರು' ಎಂದು ಅರ್ಥೈಸಬಹುದು. 'ಕಸ್ತೂರಿಯನ್ನು ಕದಡಿಮಾಡಿದ ಸೆಗಣಿಯರು ನೀರು' ಸಮಂಜಸವೆಂದು ತೋರುವುದಿಲ್ಲ.

೧೩. **ಪೊಡೆವೆಂ ಕೂಟಂ ಬಟೆಯಂ! ಪೊಡೆವೆಂ ರಕ್ಕಸನನೆಂದು ಸಾಹಸ ಭೀಮಂ(೩-೨೯)**

ಪೊಡೆವೆಂ - ಹೊಡೆಯುತ್ತೇನೆ ಎಂದರೆ ಊಟಮಾಡುತ್ತೇನೆ ಎಂದು ದೀಪಿಕೆ. ಇದುವರೆಗೆ ಕಾಣದಿರುವಷ್ಟು ವ್ಯಂಜನ ಪದಾರ್ಥಗಳನ್ನು ತಿನ್ನಲುಕಂಡಾಗ ಬಾಯಲ್ಲಿ ನೀರೂರಿ ಚೆನ್ನಾಗಿ ತಿನ್ನುವುದಕ್ಕೆ – ಇಂದು ನಾನು ಸರೀದೊಡವೆ ಎಂದು ಹೇಳುವುದು ನಮ್ಮಲ್ಲಿ ರೂಢಿಯಲ್ಲಿದೆ.

೧೪. **—ಕರ್ಪಟಾವೃತ ಕಟಿತಟನುಮಾಗಿ ಬಂದು ಕಣ್ಮುಚ್ಚಲೆಡೆಮೊಡೆ – (೩–೩೧ರ ವಚನ)**

'ಕಣ್ಮುಚ್ಚಲ್' – ಮಲಗಲು ಎಂದು ದೀಪಿಕೆಯಲ್ಲಿ ಹೇಳಿದೆ. ಈ ಪದ ಈಗಲೂ ಬಳಕೆಯಲ್ಲಿದ್ದು ತತ್ಕಾಲ ವಿಶ್ರಾಂತಿ ಹೊಂದಲು ಎಂದಷ್ಟೇ ಇದರರ್ಥ. ಇಲ್ಲಿ ಮಲಗುವುದು ಎಂದರೆ ತಲ್ಪದ ಸುಖನಿದ್ದೆ ಎಂದಾಗಲಾರದು. ಇದು ಪಂಪನ ದೇಸೀ ಪ್ರಯೋಗ; ಹಳ್ಳಿಯಲ್ಲಿ ಹಗಲು ಹೊತ್ತು ಮಲಗಲು ಅಥವಾ ವಿಶ್ರಾಂತಿಗಾಗಿ ವಿಶೇಷ ಉಪಚಾರ ಬೇಡವೆಂದೇ ಅರ್ಥ.

೧೫. **ರಸ ರಸದ ಬಾವಿ ಮನೆಮನೆಗೆ ಬೇಱಿ (೪–೧೦ ರ ರಗಳೆ)**

ದೀಪಿಕೆಯಲ್ಲಿ ಇದಕ್ಕೆ ಅರ್ಥಕೊಟ್ಟಿಲ್ಲ. ರಸದ ಬಾವಿ–ಸಿಹಿ ನೀರಿನ ಬಾವಿ. ಕರಾವಳಿ ಪ್ರದೇಶದ ಪ್ರತಿಯೊಂದು ಮನೆಗೂ ಒಂದೊಂದು ಸಿಹಿನೀರಿನ ಬಾವಿ ಇದ್ದೇ ಇದೆ. ಪಂಪನು ಬನವಾಸಿ ಪ್ರದೇಶದಲ್ಲಿ ಇದನ್ನು ಕಂಡಿದ್ದಿರಬಹುದು.

೧೬. ಬಿಟ್ಟಿದ ಪೊನ್ನ ಬೆಟ್ಟುಗಳ್ .......(೬–೩೯) ಬಿಟ್ಟಬೆಟ್ಟಾದಂತಿರ್ದ ನೀಹಾರಗಿರಿಯಂ – (೭–೭೧ರವಚನ) ಬಿಟ್ಟು – ರಾಶಿ ಹಾಕು ಎಂದು ದೀಪಿಕೆ. ನಮ್ಮ ಭಾಷೆಯಲ್ಲಿ ಇಂದೂ 'ಬಿಟ್ಟ' ಎಂದರೆ ಲೆಕ್ಕವಿಲ್ಲದಷ್ಟು ರಾಶಿ ಹಾಕು ಎಂಬ ಅರ್ಥದಲ್ಲಿ ಪ್ರಯೋಗಿಸುತ್ತಾರೆ. ಉದಾ: ಬಾಳೆಯಲ್ಲಿ ಅನ್ನವನ್ನು ಬಿಟ್ಟಿದನು ಇತ್ಯಾದಿ.

೧೭. **ತೀವಿದ ನರೆಯುಂ ಡೊಳ್ಳುಂ ......(೬–೪೩)**

ಡೊಳ್ಳುಂ – ಬೊಜ್ಜು ಹೊಟ್ಟೆಯೂ ಎಂದು ದೀಪಿಕೆ. ಈ ಪದ ಇಂದೂ ಜೀವಂತ ವಾಗಿದ್ದು ದೊಡ್ಡ ಹೊಟ್ಟೆಯವನನ್ನು (ಅಡ್ಡ ಹೆಸರಾಗಿ) ಡೊಳ್ಳು ಹೊಟ್ಟೆಯವನೆಂದೇ ವ್ಯಕ್ತಿಗೆ ತಿಳಿಯದಂತೆ ಮಾತನಾಡುವುದಿದೆ.

೧೮. —ಅಂಕವಣಿಯುಂ ಬಾಳುಂ ಬಾರುಂ.........(೮–೫೪ರ ವಚನ)

ಬಾರುಂ – ಚರ್ಮದ ಪಟ್ಟಿಯನ್ನು ಎಂದರೆ ಲಗಾಮನ್ನೋ ಎಂದು ದೀಪಿಕೆ. ಮೆಟ್ಟು ಅಥವಾ ಕಾಲ್ಜೋಡಿನ ಮೇಲ್ಭಾಗವನ್ನೂ ಬಾರು ಎಂದು ಹೇಳುತ್ತಾರೆ. ಒಂದೆ ಮೆಟ್ಟನ್ನು ಚರ್ಮದಿಂದಲೇ ಮಾಡುತ್ತಿದ್ದರಷ್ಟೆ.

೧೯. ಮೃಗಮದದ ಪುಳಿಂಚುಗಳ್.......(೮–೬೭)

ಪುಳಿಂಚು – ಗುಳ್ಳೆಗಳು ಎಂದು ದೀಪಿಕೆ. ಪುಳಿಂಚು. ಪದವನ್ನು ನಮ್ಮಲ್ಲಿ ಪುರಿಂಚು ಎನ್ನುತ್ತಾರೆ. ಅಂದರೆ ಕೈಯಲ್ಲಿ ಚೆನ್ನಾಗಿ ಹುಡಿಮಾಡಿ ಲೋಹದಂತೆ ಮಾಡಿದ ವಸ್ತು. 'ಅವನು ಅನ್ನವನ್ನು ಪುರಿಂಚುತ್ತಾನೆ. 'ಮೃಗಮದದ ಪುಳಿಂಚುಗಳ್' ಎಂದರೆ ಕಸ್ತೂರಿಯನ್ನು ಚೆನ್ನಾಗಿ ಅರೆದು ಲೇಪಿಸಿದ ಎಂದರ್ಥ.

೨೦. ಬಳೆಯ ಪೇಱನಾನೆ ಮೆಟ್ಟಿದಂತೆ.........(೮–೭೬ರ ವಚನ)

ಬಳೆಯ ಪೇಱಂ – ಬಳೆಯ ಹೇರನ್ನು ಎಂದು ದೀಪಿಕೆ. ಇಲ್ಲಿ ಬಳೆಯ ಹೇರು ಆಗಿರದೆ ಗಂಟಲ ಬಳೆ ಇರಬಹುದೇನೋ ಎನಿಸುತ್ತದೆ. 'ಪಗೆವರ ಗಂಟಲ ಬಳೆಯನೊಡೆದು ಕಳೆವುದನ್ (೮–೧೦೦ರ ವಚನ) ಅನುಕರಿಸುವಂತೆ' ಈ ಪ್ರಯೋಗ ಮತ್ತು ಇಂತಹ ಪ್ರಯೋಗಗಳನ್ನು ಗಮನಿಸಬೇಕು.

೨೧. ಮುತ್ತಿಮೊಗೆದಂ ವಿಭುಗೋಕುಲಮಂ ವಿರಾಟನಾ (೮–೯೨)

ಮೊಗೆದಂ – ತುಂಬಿಕೊಂಡನು ಎಂದರೆ ಸೆರೆಹಿಡಿದನು ಎಂದು ದೀಪಿಕೆ. ನೀರನ್ನು ಕೊಡಪಾನದಲ್ಲಿ ಮೊಗೆಯುವುದು; ಕೊಡದಲ್ಲಿ ನೀರನ್ನು ಮೊಗೆಯುವುದು – ನೀರನ್ನು ತುಂಬುವುದು ಎಂಬ ಅರ್ಥದಲ್ಲಿ ಇಂದೂ ಪ್ರಯೋಗದಲ್ಲಿದೆ.

೨೨. ಬೆರ್ಚಿ ಬೆಗಡುಗೊಂಡು..........(೮–೯೯ರ ವಚನ)

ಬೆಗಡು – ಭಯವನ್ನು ಹೊಂದು ಎಂದು ದೀಪಿಕೆ. ಒಬ್ಬನು ಅತಿಯಾಗಿ ಹೆದರಿ ಏನು ಮಾಡಬೇಕೆಂದು ತಿಳಿಯದ ಸ್ಥಿತಿಯಲ್ಲಿದ್ದರೆ ಅವನು ಬೆಗಡಾಗಿದ್ದಾನೆ; ಅಥವಾ ಹುಚ್ಚುಹುಚ್ಚಾಗಿ ವರ್ತಿಸಿದರೂ 'ಬೆಗಡ' ಎನ್ನುತ್ತಾರೆ.

೨೩. .........ಇಱುಂಕಿದ ಕೆಚ್ಚಲೆತ್ತಮೆತ್ತಿದ ಕುಡಿವಾಲ ಮಂದೆಸೆಯೆ ಕರ್ಬಸುಗಳ್ ಪರಿಗೊಂಡು ವಾಜಿಯೊಳ್, (೮–೧೦೪)

ಕರ್ಬಸುಗಳ್ – ಕಪ್ಪು ಹಸುಗಳು ಎಂದು ದೀಪಿಕೆ.

ಕಪ್ಪು ಹಸುಗಳು ಓಡಿದವು ಎಂದು ಪಂಪನಂತ ಕವಿ ಹೇಳಲಾರ. ಕಬುಲ್ – ಕಪಿಲ ಬಣ್ಣ; ಕಂದು ಬಣ್ಣ. ಕಬಿಲ್ತಿ; ಕಪಿಲ್ಚಿ – ಕಪಿಲವರ್ಣದ – ತುಳು. ಕರ್ಬಸ್ ಪೆತ್ತ (ತುಳು ನಿಘಂಟು – ಸಂ.೨. ಪ.೭೦೯) ಒಂದು ಉತ್ತಮ ತಳಿಯ ಹಸು. ಕರ್ಪಸು – ಕರ್ಬಸು – ಗರ್ಭಿಣಿಯಾದ ಉತ್ತಮ ಜಾತಿಯ ಹಸು. ಮಲಯಾಳದಲ್ಲಿ ಕರ್ಪ ಎಂದರೆ ಗರ್ಭ.

**೨೪. ಚಾತುರಂಗಮಂ ಕಟಿಕಟಿ ಮಾಗೆ ಪೇಟಿ ಪೆಸರಿಲ್ಲೆನೆ (೮-೧೦೫)**

ಪೇಟಿಪೆಸರಿಲ್ಲ – ಹೇಳುವುದಕ್ಕೆ ಹೆಸರಿಲ್ಲವೆಂದು ದೀಪಿಕೆ.

ಈ ಪದ ಇಂದೂ ಪ್ರಯೋಗದಲ್ಲಿದ್ದು; ಒಂದೂ ಕೂಡ ಉಳಿಯದೆ; ಸರ್ವವೂ ಎಲ್ಲವೂ ಎಂಬರ್ಥದಲ್ಲಿ – ಹೇಳ ಹೆಸರಿಲ್ಲದೆ ಮಾಡಿದೆ ಎಂದಿದೆ.

**೨೫. ಕೊಂದನಂಕದ ವಿಕರ್ಣನನೊಂದೆ ವಿಕರ್ಣದಿಂ ನರಂ. (೮-೧೦೭)**

ವಿಕರ್ಣನಂ – ಕರ್ಣನ ಮಗ ವಿಕರ್ಣನನ್ನು ಎಂದು ದೀಪಿಕೆ. ಇದು ಸರಿಯೆಂದು ತೋರುವುದಿಲ್ಲ. ಆದರೆ ಕರ್ಣನಿಗೆ ಭಾರತ ಯುದ್ಧದಲ್ಲಿ ಮಡಿದ ವೃಷಸೇನ ಮತ್ತು ಯುದ್ಧದಲ್ಲಿ ಉಳಿದ ವೃಷಕೇತು ಮುಂದೆ ಪಾಂಡವರನ್ನು ಸೇರಿಕೊಂಡು ಅವರ ಅಶ್ವಮೇಧಯಾಗದ ದಿಗ್ವಿಜಯ ಕಾಲದಲ್ಲಿ ಭಾಗವಹಿಸಿದವನು.

ವೃಷಸೇನನ ಕುರಿತು ವಿಕ್ರಮಾರ್ಜುನ ವಿಜಯದ ಹನ್ನೆರಡನೆಯ ಆಶ್ವಾಸದ ೧೬೧ನೆಯ ಪದ್ಯದ ಅನಂತರ ಮಾಹಿತಿ ಬರುತ್ತದೆ.

ಇವನ ಶರಕಲ್ಪಮಿವನದ
ಟಿವನಳವಿವನಣ್ಮು ನಿನಗಮುಗ್ಗಳಮಿವನಿಂ
ಪವನ ಸುತಂಗೆಲ್ಲಂ ನೀ
ನಿವನೊಳ್ ಪೊಣರೆಂದೊಡವನೊಳರಿಗಂ ಪೊಣರ್ದ (೧೨-೧೬೩)

ಮುಂದೆ ೧೨-೧೬೮ರಲ್ಲಿ 'ವಿನಾಯಕಂ ದಯೆಯಿನಿತ್ತ ಜಯಾಸ್ತ್ರಮನುರ್ಚಿ ಕೊಂಡು .........ವೈರಿ ಶಿರಸ್ಸರೋರುಹಂ'ವನ್ನು ಅರ್ಜುನ ಬೀಳಿಸುತ್ತಾನೆ.

ರನ್ನನ 'ಗದಾಯುದ್ಧ'ದಲ್ಲಿ 'ಇನನಂದನಮಂ — ವೃಷಸೇನನುಂ —ಅರ್ಧರಥರ್ಕಳ್ (೩-೫೨) ಎಂದು ಹೆಚ್ಚಿನ ಮಾಹಿತಿ ಇದೆ. ಅಂತೆಯೇ ೫-೧೩ರ ಪದ್ಯದಲ್ಲಿ ದುರ್ಯೋಧನನ ವಿಲಾಪದ ಸಂದರ್ಭದಲ್ಲೂ ವೃಷಸೇನ ಬರುತ್ತಾನೆ.

ಹಾಗಾದರೆ ಅರ್ಜುನ ಕೊಂದ ವಿಕರ್ಣನಾರು ?

ಧೃತರಾಷ್ಟ್ರನ ನೂರುಮಂದಿ ಪುತ್ರರಲ್ಲಿ ಎಂಟನೆಯವನಾಗಿ ವಿಕರ್ಣನ ಹೆಸರು ಬರುತ್ತದೆ. ಕೆಲವು ಕಡೆ ಇಪ್ಪತ್ತನಾಲ್ಕನೆಯವನೆಂದೂ ಹೇಳಿವೆ.

ದುರ್ಯೋಧನನು ದ್ರೌಪದಿಯನ್ನು ಸಭೆಗೆ ಎಳೆದು ತರಲು ಹೇಳಿದಾಗ ವಿಕರ್ಣ ಅದನ್ನು ವಿರೋಧಿಸಿದ್ದನು.

ವ್ಯಾಸ ಭಾರತದ ವಿರಾಟಪರ್ವದಲ್ಲಿ ಅಂತರ್ಗತವಾದ ಗೋಹರಣ ಪರ್ವದ ೫೪ನೆಯ ಅಧ್ಯಾಯದಲ್ಲಿ –

ತಸ್ಮಿಂಸ್ತು ಯುದ್ಧೇ ತುಮುಲೇ ಪ್ರವೃತ್ತೇ । ಪಾರ್ಥಂ ವಿಕರ್ಣೋಽತಿರಥಂ ರಥೇನ ।
ವಿಪಾಠವರ್ಷೇಣ ಕುರುಪ್ರವೀರೋ । ಭೀಮೇನ ಭೀಮಾನುಮಾಸಸಾದ ॥ ೯ ॥
ತತೋಽವಿಕರ್ಣಸ್ಯ ಧನುರ್ವಿಕೃಷ್ಯ ಜಾಂಬೂನದಾಗ್ರ್ಯೋಪಜಿತಂ ಧೃಢಜ್ಯಮ್ ।
ಅಪಾತಯತ್ ತಂ ಧ್ವಜಮಸ್ಯ ಮಥ್ಯ ಛಿನ್ನಧ್ವಜಃ ಸೋಽಪ್ಯಪಯಾಜ್ಜವೇನ ॥ ೧೦ ॥

ವಿಕರ್ಣನನ್ನು ಅರ್ಜುನ ಸೋಲಿಸಿದ. ಭಾರತ ಯುದ್ಧದಲ್ಲಿ ಭೀಮನು ಇವನನ್ನು ಕೊಂದನು. (ದ್ರೋಣ ಪರ್ವ ೧೩೭-೨೯) ಹಾಗಾದರೆ ಪಂಪನ ಪ್ರಕಾರಗೋಗ್ರಹಣದಲ್ಲಿ ಪಾಂಡವರಿಗೆ ಎದುರಾಳಿಯಾಗಿ ಮಡಿದ ವಿಕರ್ಣ ಯಾರು?

ಕುಮಾರವ್ಯಾಸನ 'ಕರ್ಣಾಟ ಭಾರತ ಕಥಾ ಮಂಜರಿ' ಯ ವಿರಾಟಪರ್ವದ ಏಳು ಮತ್ತು ಎಂಟನೆಯ ಸಂಧಿಯಲ್ಲಿ ಗೋಗ್ರಹಣದ ಸಂದರ್ಭದಲ್ಲಿ ವಿಕರ್ಣನ ಹೆಸರು ಬರುತ್ತದಾದರೂ ಅವನ ಹತ್ಯೆಯ ಉಲ್ಲೇಖವಿಲ್ಲ.

ಕಾಯಲಾಪರೆ ಕರೆಯಿರಾ ಕ
ರ್ಣಾಯತಾಸ್ತ್ರನಕಟ ಕೌರವ
ರಾಯ ಸಿಲುಕಿದನೆಲ್ಲಿ ಭೀಷ್ಮ ದ್ರೋಣಕೃಪರೆನುತ
ಬಾಯ ಬಿಡೆ ಕುರುಸೇನೆ ಗುರು ಗಾಂ
ಗೇಯ ಶಕುನಿ ವಿಕರ್ಣ ಕೃಪ ರಾ
ಧೇಯ ಸೈಂಧವ ಚಿತ್ರಸೇನಾದಿಗಳು ಜೋಡಿಸಿತು. (ವಿ.ಪ.ಸಂ. ೭-೪೮)

❐

# ೨. ಕೆಳದಿ ಅರಸರು ಮತ್ತು ಸವಣೂರಿನ ನವಾಬರೂ

■ ***ಕೆಳದಿ ವೆಂಕಟೇಶ್ ಜೋಯಿಸ್***

ಸವಣೂರಿನ ನವಾಬರು ಮೊದಲು ಮಿಯಾನ್ ವಂಶಕ್ಕೆ ಸೇರಿದ ಪಠಾಣರು. ಅವರ ವಂಶೀಕರಲ್ಲೊಬ್ಬರು ಕ್ರಿ.ಶ. ೧೩೦೦ರಲ್ಲಿ ತೈಮೂರನ ಸೇನೆಯೊಡನೆ ಇಂಡಿಯಾಕ್ಕೆ ಬಂದರೆಂದು ಹೇಳಲಾಗಿದೆ. ಆತನ ವಂಶೀಕರು ದಿಲ್ಲಿಯ ಆಸ್ಥಾನದಲ್ಲಿ ಅಧಿಕಾರ ಪಡೆದಿದ್ದರು. ವಿಜಾಪುರ ಮಹಮ್ಮದ್ ಆದಿಲ್‌ಶಾಹನ (೧೬೨೬-೫೬) ಕಾಲದಲ್ಲಿ ಬಹಲೋಲ್ ಖಾನ್ ಎಂಬುವನು ಆ ಬಾದಷಹನ ಹತ್ತಿರ ಕೆಲಸದಲ್ಲಿದ್ದನು. ಅಲಿ ಆದಿಲ್ ಷಹನ ಕಾಲದಲ್ಲಿ ಅಬ್ದುಲ್ ರಹೀಮ್ ಎಂಬುವನು ಕೆಲಸ ಮಾಡಿದನು. ಅವನ ಮಗನಾದ ಅಬ್ದುಲ್ ಕರೀಮನು ಅದವಾನಿಯ ಜಹಗೀರದಾರನಾದ ಮಸೂದ್ ಖಾನನ ಮಗಳನ್ನು ಮದುವೆಯಾಗಿ ಆ ಹೆಂಡತಿಯ ಕಡೆಯಿಂದ ಬಾಗಲಕೋಟೆಯನ್ನು ಸಂಪಾದಿಸಿದನು.

ಬಹಲೋಲ್ ಖಾನನಿಂದ ನಾಲ್ಕನೆಯವನಾದ ಅಬ್ದುಲ್ ರವೂಫನು ಸವಣೂರನ್ನು ಸ್ಥಾಪಿಸಿದನು. ಇವನಿಗೆ ಮೊಗಲ್ ಚಕ್ರವರ್ತಿಗಳಿಂದ ದಿಲೇರಖಾನ್ ಬಹದ್ದೂರ್ ದಿಲೇರಜಂಗ್ ಎಂಬ ಬಿರುದು ಕೊಡಲ್ಪಟ್ಟಿತ್ತು. ಇವನ ಮುಂದಿನವರೂ ಅದನ್ನೇ ಉಪಯೋಗಿಸಿದ್ದಾರೆ. ಶ್ರಾವಣ ಮಾಸದ ಶ್ರವಣ ನಕ್ಷತ್ರದಲ್ಲಿ ಆ ಊರನ್ನು ಕಟ್ಟಿದ್ದರಿಂದ ಅದಕ್ಕೆ ಶ್ರವಣೂರು (ಸವಣೂರು) ಎಂದು ಹೆಸರು ಬಂದಿತು.

ಲಿಂಗಣ್ಣ ಕವಿಯ ಕೆಳದಿ ನೃಪವಿಜಯ ಮತ್ತು ದಿಲೇರಜಂಗಿ ಎಂಬ ಪರ್ಶಿಯನ್ ಕಾವ್ಯದಲ್ಲಿ ಕೆಳದಿ ಮತ್ತು ಸವಣೂರು ಇತಿಹಾಸ ಸಂಬಂಧದ ಕುರಿತಂತೆ ಕೆಲ ಮಾಹಿತಿಗಳು ಕಂಡುಬರುತ್ತವೆ. ಮೊದಲನೆಯ ಬಸವಪ್ಪನಾಯಕನ ಕಾಲದಲ್ಲಿ ಸವಣೂರಿನ ಮೇಲೆ ಯುದ್ಧವಾದದ್ದನ್ನು ಕೆಳದಿ ನೃಪವಿಜಯವು ಹೀಗೆ ವರ್ಣಿಸಿದೆ:

ವ॥ ಇಂತು ಮೊಗಲರಧೀನಮಾದ ಪರಿಸ್ತರಣಂಗಳಂ ಸ್ವಾಧೀನಂಗೈದನಂತುಮಲ್ಲದೆಯುಂ

ಕಂ॥ ಕರಿತುರಗಪತ್ತಿಸಹಿತಂ
ದುರುಸೌರ್ಯೋದ್ರೇಕದಿಂದಮೈದಿದ ಯವನೇ
ಶ್ವರ ಸವಣೂರ ನವಾಬನ
ಗರುಪಿಕೆಯಂ ತೀರ್ಚಿ ರಣದೆ ಮುರಿದೋಡಿಸಿದಂ[೧]

ವ॥ ಇಂತು ಬಲಶಾಲಿಯಾದ ಸವಣೂರ ನವಾಬನಂ ಗುರುವಪ ಮಂತ್ರಿಯ ಮುಖದಿಂ ಯುದ್ಧರಂಗದೊಳ್ ಪಿಂದೆಗೆಸಿ ಸುಖಸಂಕಥಾ ವಿನೋದದಿಂ ರಾಜ್ಯಪ್ರತಿಪಾಲ ನಂಗೆಯ್ಯುತಿರ್ದನಂತುಮಲ್ಲದೆಯುಂ...

ಅಂದರೆ ಬಸವಪ್ಪನಾಯಕನು ಆನೆ ಕುದುರೆ ಕಾಲಾಳು ಸಹಿತವಾಗಿ ಪರಾಕ್ರಮಾತಿಶಯ ದಿಂದ ಎದುರಾದ ಯವನೇಶ್ವರನಾದ ಸವಣೂರು ನವಾಬನ ಗರ್ವವನ್ನು ಮುರಿದು ಯುದ್ಧದಲ್ಲಿ ಸೋಲಿಸಿ ಓಡಿಸಿದ್ದಲ್ಲದೆ ಆ ಬಲಶಾಲಿಯಾದ ಸವಣೂರು ನವಾಬನನ್ನು ಗುರುವಪ್ಪ ಮಂತ್ರಿಯ ಮೂಲಕ ರಣರಂಗದಲ್ಲಿ ಹಿಂದಕ್ಕೆ ಓಡಿಸಿ ಸುಖದಿಂದಲೂ ವಿನೋದದಿಂದಲೂ ರಾಜ್ಯವನ್ನು ಪರಿಪಾಲಿಸುತ್ತಿದ್ದದ್ದನ್ನು ದಾಖಲಿಸುತ್ತದೆ. ಇದು ಮೊದಲನೆಯ ಬಸವಪ್ಪನಾಯಕನ ಕಾಲದಲ್ಲಿ ನಡೆದ ಘಟನೆಯನ್ನು ತಿಳಿಸುತ್ತದೆ.

*ಡಾ. ಚಿಟ್ನೀಸ್‌ಅವರು ತಮ್ಮ ಕೆಳದಿ ಪಾಲಿಟಿಯಲ್ಲಿ :*

The Keladinripavijayam mentions Guruvappa as a mantri under Basavappanayaka I. without specifying his functions. He was instrumental in repulsing the powerful Nawab of Savanur on the Battle field[2] ...

Keladi also maintained diplomatic relations with other native states such as Malbar, Biligi, Chitradurga, Mysore, Sode and Savanur.[3]

*ಎಂಬುದಾಗಿ ಬರೆಯುತ್ತಾರೆ. ಅಂತೆಯೇ ಡಾ. ಸ್ವಾಮಿನಾಥನ್ ಅವರು :*

The forts of Anegutti Mahadevapura, Tadeya Honnali and Mirjan were captured from them. The invasion of the Nawab of Savanur as kanara was also repulsed. As there are only very meagre sources of information for these capaigns of Basavappa, it is very difficult to verify and date them. (KNV X and Nayakas of Ikkeri p.126).

ಈ ರೀತಿ ದಾಖಲಿಸುತ್ತಾರೆ. ಕೆಳದಿ ನೃಪವಿಜಯವು ಇಮ್ಮಡಿ ಸೋಮಶೇಖರ ನಾಯಕನ ಕಾಲದ ಘಟನೆಯನ್ನು ಹೀಗೆ ವರ್ಣಿಸುತ್ತದೆ:

ಕಂ॥ ವೈರಿಗಳುಪಟಳದಿಂ ಸವಣೂರ
ನವಾಬಂ ಸ್ವದೇಶದೊಳ್ ನಿತ್ತರಿಸ
ಲ್ಕಾರದೆ ಸಹಾಯಮಂ ತಾಂ
ಹಾರುತೆ ರಾಯಸವನ್ನೆದೆ ಬರೆದಟ್ಟಲೊಡಂ

ಕೋಹಿಲೆಯ ಸಿದ್ಧಪ್ಪನ ಕೂ
ಡಾಹವನಿಸ್ಸೀಮ ಸುಭಟರಂ ತೆರಳಿಸಿ ಸ
ನ್ನಾಹದೊಳ್ಳೆದಿದ ಶತ್ರು
ವ್ಯೂಹವನಂತಕದೊಳೆ ಸದೆದು ಮುರಿದೋಡಿಸುತುಂ
ಕುಜನರನಲೆದು ಬಳಿಕ್ಕಂ
ನಿಜಪದದೊಳ್ ತನ್ನ ಬಾಬನಂ ನಿಲಿಸಿ ನೃಪ
ವ್ರಜದೊಳ್ ಮಿಗೆ ಪರಮೋನ್ನತ
ಭುಜಬಲಮಂ ಮೆರೆದನಾ ನೃಪಾಲಕವರ್ಯಂ

ಸವಣೂರ ನವಾಬನು ಶತ್ರುಗಳ ಕಾಟದಿಂದ ತನ್ನ ದೇಶದಲ್ಲಿ ನೆಲೆಸಲು ಅಸಮರ್ಥವಾಗಿ ಬಸವಪ್ಪನಾಯಕನ ಸಹಾಯವನ್ನು ಬಯಸಿ ರಾಯಸವನ್ನು ಬರೆದು ಕಳುಹಿಸಿದನು. ಆಗ ಸೋಮಶೇಖರನಾಯಕನು ಕೋಹಿಲೆಯ ಸಿದ್ಧಪ್ಪನ ಸಂಗಡ ಯುದ್ಧದಲ್ಲಿ ನಿಸ್ಸೀಮರಾದ ಸೈನಿಕರನ್ನು ಕಳುಹಿಸಿ, ಸಾಕಷ್ಟು ಸಿದ್ಧತೆಯಿಂದ ಬಂದಿದ್ದ ಶತ್ರುವ್ಯೂಹವನ್ನು ಯುದ್ಧದಲ್ಲಿ ಹೊಡೆದು, ಸೋಲಿಸಿ, ಓಡಿಸಿದನು. ದುರ್ಜನರನ್ನು ಓಡಿಸಿದ ಬಳಿಕ ಸವಣೂರ ನವಾಬನನ್ನು ಆತನ ಸ್ಥಾನದಲ್ಲಿಯೇ ಮತ್ತೆ ನಿಲ್ಲಿಸಿ ರಾಜ ಶ್ರೇಷ್ಠನಾದ ಸೋಮಶೇಖರನಾಯಕನು ರಾಜಸಮೂಹದಲ್ಲಿಯೇ ಅತಿ ಹೆಚ್ಚಿನ ಭುಜಬಲವನ್ನು ಮೆರೆದನು.

ವ॥ ಆ ಸವಣೂರು ಸಂಸ್ಥಾನಮಂ ಕ್ರಮದಿಂ ಮುನ್ನಾಳ್ದ ವಿಜಾಪುರದ ಪಾತುಶಾಹರ ಬಗೆ: ವಜೀರ ರಗಟೀ ಬಲೂಲಖಾನಂ ಅವನ ಮಗಂ ಚಿಕ್ಕಬಬೂಲಖಾನಂ ಅವನ ಮಗನಬ್ದುಲ್ಲರಹೊಯೆಂಬವಂ ಡಿಳ್ಳಿ ಔರಂಗಜೇಬ ಪಾತುಶಾಹಂ ವಿಜಾಪುರದ ಸಂಸ್ಥಾನಮಂ ಸ್ವಾಧೀನಂಗೈದನಂತರಮಾ ಅಬ್ದುಲ್ಲರಹೋಯೆಂಬವಂಗೆ ದಿಲಾಲನೆಂದು ಪ್ರತಿನಾಮವಿತ್ತು ನೀಂ ಮಲೆನಾಡು ಮುಂತಾದ ದಾಕ್ಷಿಣಾತ್ಯ ರಾಜ್ಯದ ಮೇಲುಪರಾಂಬಿಕೆಯೊಳಿಹುದೆಂದುನಿಯಾಮಕಂ ಗೈಯ್ದು ನಿಲಸಲವಂ ತತ್ಸವಣೂರೊಳ್ ಬಲಿಷ್ಠನಾಗಿ ನಿಂದಂ ಆ ದಿಲಾಲನ ಮಕ್ಕಳ್ ಅಬ್ದುಲ್ಲ ಮಹಮುದ್ಧ ಕರೀಮ ಸತಾರ ಗಫಾರರೆಂದು ನಾಲ್ವರ್, ಅವರೊಳ್ ಗಫಾರನ ಮಗಂ ಮದೀಜಂ ಇಂತಿವರ್ ಸವಣೂರನಾಳ್ದವರ್ ಇಂತು ನೆಗಳ್ತೆವೆತ್ತ ಸವಣೂರ ನವಾಬನ ವಂಶಸಂಜಾತರೊಳ್ ಅಬ್ದುಲ್ಲಮಹಮುದ್ಧಖಾನನ ಶತ್ರುವರ್ಗಮಂವಾರೆದೆಗೆಸಿ ಸಂಸ್ಥಾನದೊಳ್ ನಿಲಿಸಿ ಸವಣೂರ ನವಾಬಂ ಕಳುಪಿದ ಪತ್ತೆಲಸ್ಕರಿಯೆಂಬಾನೆ ತುಗ್ರಮುಚಿತ ವುಡುಗೊರೆಗಳಂ ಪರಿಗ್ರಹಿಸಿ ಪರಮ ಪ್ರಖ್ಯಾತಿಯಂ ಪಡದನಂತುಮಲ್ಲದೆಯುಂ.

ಸವಣೂರು ಸಂಸ್ಥಾನವನ್ನು ಕ್ರಮವಾಗಿ ಹಿಂದೆ ಅಳಿದ ಬಿಜಾಪುರದ ಬಾದಷಹರ ವಿವರ : ಮಂತ್ರಿ ರಗಟೀ ಬಲೂಲಖಾನ್, ಅವನ ಮಗ ಚಿಕ್ಕ ಬಲೂಲ್ ಖಾನ್, ಅವನ ಮಗ ಅಬ್ದುಲ್ ರಹೋ. ಡಿಲ್ಲಿಯ ಔರಂಗಜೇಬ್ ಬಾದಷಹನು ಬಿಜಾಪುರ ಸಂಸ್ಥಾನವನ್ನು ಸ್ವಾಧೀನಪಡಿಸಿಕೊಂಡ ನಂತರ ಈ ಅಬ್ದುಲ್ ರಹೋವೆಂಬವನಿಗೆ ದಿಲಾಲ್ ಎಂದು ಪ್ರತಿನಾಮವಿಟ್ಟು ಮಲೆನಾಡು ಮುಂತಾದ ದಕ್ಷಿಣದ ಪ್ರಾಂತದ ಮೇಲುಸ್ತುವಾರಿಯಲ್ಲಿ ಇರತಕ್ಕುದೆಂದು ನೇಮಕ ಮಾಡಿದನು. ಈ ನವಾಬನು ಸವಣೂರಿನಲ್ಲಿ ಬಲಿಷ್ಠನಾಗಿ ನಿಂತನು. ಆ ದಿಲಾಲನ ಮಕ್ಕಳು ಅಬ್ದುಲ್ ಮಹಮೂದ್, ಕರೀಮ್, ಸತಾರ್ ಮತ್ತು ಗಫಾರ್

ಎಂಬುದಾಗಿ ನಾಲ್ವರಿದ್ದರು. ಅವರಲ್ಲಿ ಗಫಾರನ ಮಗ ಮದೀಜ. ಈ ರೀತಿ ಇವರುಗಳು ಸವಣೂರನ್ನು ಆಳಿದರು. ಹೀಗೆ ಪ್ರಸಿದ್ಧಿ ಪಡೆದ ಸವಣೂರು ನವಾಬನ ವಂಶದಲ್ಲಿ ಹುಟ್ಟಿದ ಅಬ್ದುಲ್ ಮಹಮೂದ್ ಖಾನನ ಶತ್ರುವರ್ಗವನ್ನು ಓಡಿಸಿ, ಸೋಲಿಸಿ ಆ ಸಂಸ್ಥಾನವನ್ನು ಕಾಪಾಡಿದನು. ಸವಣೂರು ನವಾಬನು ಕಳುಹಿಸಿಕೊಟ್ಟ ಪತ್ತಿ ಲಷ್ಕರಿ ಎಂಬ ಆನೆ, ಕುದುರೆ ಮುಂತಾದ ಉಚಿತವಾದ ಉಡುಗೊರೆಗಳನ್ನು ಸ್ವೀಕರಿಸಿ ಪರಮ ಕೀರ್ತಿಯನ್ನು ಪಡೆದನು.[೪]

ಇದು ಇಮ್ಮಡಿ ಸೋಮಶೇಖರನ ಕಾಲವಾಗುತ್ತದೆ. ಕಾಲ ಕ್ರಿ.ಶ. ೧೭೧೪–೧೭೩೯.

*ಡಾ. ಚಿಟ್ನೀಸ್‌ರವರು ಕೆಳದಿ ಪಾಲಿಟಿಯಲ್ಲಿ ಹೀಗೆ ಬರೆಯುತ್ತಾರೆ:*

Somasekharanayaka II helped in the restoration of the Nawab of Savanur by routing his enemies. Restored the Horapanhalli fort to bagadi Basavappanayaka from Biligodi Baramannanayaka of Chitradurga and installed Gopalanayaka on the Belur throne, by dethroning his infatuated brother Venkadrinayaka.[5]

*ದಿ ನಾಯಕಾಸ್ ಆಫ್ ಇಕ್ಕೇರಿಯಲ್ಲಿ ಡಾ: ಸ್ವಾಮಿನಾಥನ್ ಅವರು ಹೀಗೆ ಬರೆಯುತ್ತಾರೆ:*

The Keladi kingdom was subjected to another invasion. Banji Ghorpade allied himself with a Muslim Fathey allah Khan and entered the kingdom. But he was defeated Somasekhara Nayaka, further helped the minor chiefs like the Nawab of Savanur, chief of Rayadurga, chief of Budi etc.,............(QJMS, XXIIp. 85, NOI page 138)

*ಕೆಳದಿ ನೃಪವಿಜಯವು ಇಮ್ಮಡಿ ಬಸವಪ್ಪನಾಯಕನ ಕಾಲದ ಘಟನೆಯನ್ನು ಹೀಗೆ ವರ್ಣಿಸುತ್ತದೆ:*

ವ॥ ಇಂತು ಕೋಟಾತ್ರಯಂಗಳಂ ಸ್ವಾಧೀನಂಗೈಯಲ್ ಮದವಳಿದು ವೇಣುಪುರ ವರಕ್ಕೆಳ್ತಂದು ಸಂದರ್ಶನಂಗೆಯ್ದು ತನ್ನ ಸಂಸ್ಥಾನದ ಅರಭಾರ ಸುಖದುಃಖಾದಿ ವಿವರಣಂಗಳನುಸಿರ್ದು ದೈನ್ಯೋಕ್ತಿಗಳಂ ನುಡಿದಾ ತರಿಕೆರೆಯ ನಾಯಕನಂ ನಯೋಕ್ತಿಯಿಂ ಮನ್ನಿಸಿ ಗಜಾಶ್ವ ವಸ್ತ್ರಾಭರಣಾದಿಗಳನಿತ್ತು ಸನ್ಮಾನಿಸಿ ಕಳುಹಿ ಸುಖದಿಂದ ರಾಜ್ಯಂಗೆಯ್ಯುತ್ತುಮಿರ್ದನಂತುಮಲ್ಲದೆಯುಂ

ಕಂ॥ ಹರಪುರದರಸನುಮಂ ಭಾ
ಸುರತರಸವಣೂರ ಪತಿ ನವಾಬನ ಫೌಜಂ
ಬರಿಸಿ ಬಹುಸೈನ್ಯಸಹಿತಂ
ತೆರಳಿಸಿ ವರ ಸಬ್ಬನೀಸ ಕೃಷ್ಣಪ್ಪನುಮಂ
ವ॥ ಪದುಳಿಸಿಮಾಯಾಕೊಂಡಪಡೆಯೊಳ್ ಬಹುಸೈನ್ಯಸಮೇತನಾಗುತು
ನ್ಮದದಿನಿದಿರ್ಚಿ ಮಾರ್ಮಲೆತು.......ವೊಳಪುಕ್ಕು ಪೊರ್ದದಾ

ಇದು ಇಮ್ಮಡಿ ಬಸವಪ್ಪನಾಯಕನ ಕಾಲದಲ್ಲಿ ನಡೆದ ಘಟನೆಯನ್ನು ಉಲ್ಲೇಖಿಸುತ್ತದೆ. ಕೆಳದಿ ಇತಿಹಾಸದಲ್ಲಿ ಕ್ರಿ.ಶ. ೧೬೯೭ ರಿಂದ ಕ್ರಿ.ಶ. ೧೭೫೪ರ ಅವಧಿಯಲ್ಲಿ ಅಂದರೆ ಮೊದಲನೆಯ ಬಸವಪ್ಪನಾಯಕ, ಇಮ್ಮಡಿ ಬಸವಪ್ಪನಾಯಕ, ಇಮ್ಮಡಿ

ಸೋಮಶೇಖರನಾಯಕನ ಕಾಲದಲ್ಲಿ ಕೆಳದಿ ಮತ್ತು ಸವಣೂರಿನ ನವಾಬರ ಜೊತೆ ಸಂಬಂಧವಿರುವುದು ಕಂಡುಬರುತ್ತದೆ. ಇದೇ ವೇಳೆಯಲ್ಲಿ ಅಂದರೆ ೧೭೪೯ ರಿಂದ ೧೭೫೬ರವರೆಗೆ ಸವಣೂರಿನ ನವಾಬರು ಶ್ರೀ ಕೂಡ್ಲಿ ಶೃಂಗೇರೀ ಸಂಸ್ಥಾನಕ್ಕೆ ಇನಾಮು ಕೊಟ್ಟಿರುವ ಕುರಿತು ಅಲ್ಲಿಯ ದಾಖಲೆಗಳು ತಿಳಿಸುತ್ತವೆ. ಶ್ರೀ ಮಠದಲ್ಲಿ ನಂ.೯೯೭ ರಿಂದ ೨೧೬ರ ವರೆಗೆ ಒಟ್ಟು ೨೦ ನಿರೂಪಗಳಿವೆ. ಇವರ ಫರ್ಮಾನುಗಳು ಪರ್ಶಿಯನ್ ಮತ್ತು ಮೋಡಿ ಮರಾಠಿ ಲಿಪಿಗಳಲ್ಲಿವೆ.

*ದಿಲೇರಜಂಗಿ ಎಂಬ ಪರ್ಶಿಯನ್ ಕಾವ್ಯದಲ್ಲಿ ಕೆಳದಿ ಮತ್ತು ಸವಣೂರು ಇತಿಹಾಸ ಸಂಬಂಧದ ಕುರಿತಂತೆ :* [೧]

ಕ್ರಿ.ಶ. ೧೭೬೩ರಲ್ಲಿ ಹೈದರನು ಮೈಸೂರು ಅರಸರನ್ನು ಸರಿಸಿ, ತಾನ್ನೇ ಸುಲ್ತಾನನಾದ ಮೇಲೆ ಅವನಿಗೆ ತನ್ನ ರಾಜ್ಯವನ್ನು ವಿಸ್ತರಿಸಬೇಕೆನಿಸಿತು. ಅವನ ಕಣ್ಣು ಸವಣೂರು, ಕಡಪಾ ಮೊದಲಾದ ನವಾಬರ ಮೇಲಿತ್ತು. ಹಾಗಾಗಿ ಅವನ ಸೈನ್ಯ ಮೊದಲು ಬಿದನೂರಿನತ್ತ ಹೊರಟಿತು. ಅಲ್ಲಿಯ ರಾಣಿ ಚೆನ್ನಮ್ಮನಿಗೆ ಹೈದರನನ್ನು ತಾನೊಬ್ಬಳೇ ಎದುರಿಸುವುದು ಸಾಧ್ಯವಿಲ್ಲವೆಂದು, ಸವಣೂರು ನವಾಬ ಹಕೀಮಖಾನನ ಸಹಾಯವನ್ನು ಯಾಚಿಸಿದಳು. ತಕ್ಷಣವೇ ನವಾಬನು ತನ್ನ ಸೈನ್ಯವನ್ನು ತೆಗೆದುಕೊಂಡು ಹೋಗಿ, ಚಿಕ್ಕಮುಳಗುಂದದ ಬಳಿ ನಿಲ್ಲಿಸಿದನು. ಇತ್ಯಾದಿ ವಿವರ ಬರುತ್ತದೆ.[೨] ಅಬ್ದುಲ್ ಮಜೀದಖಾನನು ಆಡಳಿತ ನಡೆಸುವ ಸಂದರ್ಭದಲ್ಲಿ ಇವನು ಉತ್ತರ ಕರ್ನಾಟಕದ ಸೋಂದಾ(ಸ್ವಾದಿ) ಮೇಲೆ ಪ್ರಭುತ್ವವನ್ನು ಸ್ಥಾಪಿಸಿದ್ದನಲ್ಲದೆ.[೩]

ಅಬ್ದುಲ್ ಮಜೀದಖಾನನು ಚಿತ್ರದುರ್ಗದ ಮೇಲೆ ಏರಿ ಹೋಗಿದ್ದನು. ೧೭೪೧ರಲ್ಲಿ ಮಜೀದಖಾನನು ಹಿರೇ ಮದಕರಿ ನಾಯಕನು ಆಳುವಾಗ ಅವನ ಮೇಲೆ ಏರಿ ಹೋಗಿದ್ದನು. ಕೆಳದಿ ಸಂಸ್ಥಾನದವರು ಬೇರೆ ಕೆಲವು ಸಂಸ್ಥಾನಿಕರೊಂದಿಗೆ ಸೇರಿಕೊಂಡು ಚಿತ್ರದುರ್ಗವನ್ನು ವಶಪಡಿಸಿಕೊಳ್ಳಲು ಪ್ರಯತ್ನ ಮಾಡಿದ್ದರು. ಕೆಳದಿ ಬಸಪ್ಪನಾಯಕನು ಸವಣೂರು ಆನೇಗುಂದಿ, ರಾಯದುರ್ಗ, ಹರಪನಹಳ್ಳೀ ಪಾಳೆಯಗಾರರನ್ನು ಸೇರಿಸಿಕೊಂಡು ಮದಕರಿ ನಾಯಕನ ಮೇಲ ೧೭೪೧ರಲ್ಲಿ ದಾಳಿ ಮಾಡಿ, ಅವನ ರಾಮಗಿರಿ ಕೋಟೆಯನ್ನು ವಶಪಡಿಸಿಕೊಂಡನು. ಆದರೆ ಹಿರೇ ಮದಕರಿ ನಾಯಕನು ಅವರೊಡನೆ ಶೌರ್ಯದಿಂದ ಹೋರಾಡಿ ಆ ಕೋಟೆಯನ್ನು ಪುನರಾಕ್ರಮಿಸಿಕೊಂಡನು. ೧೭೪೮ರಲ್ಲಿ ಅಬ್ದುಲ್ ಮಜೀದಖಾನನನ್ನು ಒಳಗೊಂಡು ಈ ಪಾಳೆಯಗಾರರು ಮತ್ತೆ ಚಿತ್ರದುರ್ಗ ಸಂಸ್ಥಾನದ ಮೇಲೆ ದಾಳಿ ಮಾಡಿ ಮಾಯಗೊಂಡ ಕೋಟೆಯನ್ನು ವಶಪಡಿಸಿಕೊಂಡರು. ಕಾಳಗದಲ್ಲಿ ಹಿರೇ ಮದಕರಿ ನಾಯಕನು ಹರಪನಹಳ್ಳಿ ಪಾಳೆಯಗಾರನಾದ ಸೋಮಶೇಖರನಾಯಕನಿಂದ ಗಾಯಗೊಂಡು ಸತ್ತನು. ಆದರೆ ದಿಲೇರಜಂಗ್ ಕಾವ್ಯದಲ್ಲಿ ಹಿರೇ ಮದಕರಿ ನಾಯಕನು, ಸವಣೂರು ನವಾಬ ಅಬ್ದುಲ್ ಮಜೀದಖಾನನು ಗಾಯಗೊಳಿಸಿದ್ದರಿಂದ ಸತ್ತನು ಎಂದು ದಾಖಲಿಸಲ್ಪಟ್ಟಿದೆ. ಪ್ರಾಯಶಃ ನವಾಬರೇ ಬರೆಸಿದ ಈ ಕಾವ್ಯವು ಅಬ್ದುಲ್ ಮಜೀದಖಾನನ ಕೀರ್ತಿಯನ್ನು ಹೆಚ್ಚಿಸಲು ಹೀಗೆ ಬರೆಸಿರುವ ಸಂಭವವಿದೆ.[೪] ಈ ಕೃತಿಯನ್ನು ಅವರ ಮನೆತನದವರೇ

ಬರೆಸಿಕೊಂಡಿರುವುದರಿಂದ ಕೆಲ ಸಂದರ್ಭಗಳಲ್ಲಿ ಅತಿಶಯೋಕ್ತಿಯೂ ಕಂಡುಬರುತ್ತದೆ. ಕೆಲ ಘಟನೆಗಳು ಕೆಳದಿ ನೃಪವಿಜಯದಲ್ಲಿ ಹೇಳಿರುವ ಘಟನೆಗೆ ಸರಿಹೊಂದುವಂತಿವೆ.

ಇಲ್ಲಿ ಉಲ್ಲೇಖಿಸಿರುವ ಚೆನ್ನಮ್ಮ ಬಹುಶಃ ವೀರಮ್ಮಾಜಿ ಆಗಿರಬೇಕು. ಏಕೆಂದರೆ ಆ ವೇಳೆಗೆ ರಾಣಿ ವೀರಮ್ಮಾಜಿ ಆಡಳಿತ ನಡೆಸುತ್ತಿದ್ದಳು. ಈ ವೀರಮ್ಮಾಜಿಯು ಸವಣೂರು ನವಾಬನ ಸಹಕಾರದಿಂದಲೇ ಹೈದರನನ್ನು ಮೊದಲು ಸೋಲಿಸಿದ್ದು ಕಂಡುಬರುತ್ತದೆ. ಹೈದರನ ಕಡೆಯ ಕಿರ್ಮಾನಿಯು ರಾಣಿ ವೀರಮ್ಮಾಜಿಯನ್ನು ಶ್ಲಾಘಿಸುತ್ತ ಮುಸ್ಲಿಮನನ್ನು ಸೋಲಿಸಲು ಮುಸ್ಲಿಮನ ಸಹಾಯವನ್ನು ಪಡುದುದನ್ನು ಶ್ಲಾಘಿಸಿದ ಇತಿಹಾಸವಿದೆ. ಇಲ್ಲಿ ಉಲ್ಲೇಖಿತಗೊಳ್ಳುವ ಬಾಗಳಿ ಸೋಮಶೇಖರನಾಯಕ ಕುರಿತಂತೆ ಪುಣೆ ಪತ್ರಾಗಾರದಲ್ಲಿ ಸಾಕಷ್ಟು ದಾಖಲೆಗಳಿರುವುದು ಕಂಡುಬರುತ್ತದೆ. ಮಾದರಿಗಾಗಿ ಒಂದನ್ನು ಇಲ್ಲಿ ಕೊಡಲಾಗಿದೆ.

ಕೆಳದಿ ಮತ್ತು ಸವಣೂರು ಇತಿಹಾಸ ಸಂಬಂಧ ಗಾಢವಾದುದಾಗಿದ್ದು ಈ ಕುರಿತಂತೆ ಇನ್ನೂ ಹೆಚ್ಚಿನ ಸಂಶೋಧನೆ ಆಗಬೇಕಿದೆ.

---

**ಅಡಿಟಿಪ್ಪಣಿಗಳು:**

೧. ಕೆನೃವಿ. ಪುಟ:೨೫೦, ಮೊದಲನೆಯ ಬಸವಪ್ಪನಾಯಕನ ಕಾಲ: ಕ್ರಿ.ಶ. ೧೬೯೭-೧೭೧೪.

೨-೩ KNVP.175, Keladi Polity p71, K.N. Chitnis,Karnataka University, Dharwad 1974, Nayakas of Ikkeri p 126.

೪. ಕೆನೃವಿ ಪುಟ: ೨೫೪-೨೫೫

೫. Keladi Polity p. 193. KNV.pp.174, 178, 179, 182, 188.

೬. ಶ್ರೀಗೋವಿಂದ ಮೂರ್ತಿ ದೇಸಾಯಿಯವರ ಸವಣೂರಿನ ನವಾಬರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೧೯೯೯. ಇದರಿಂದ ಕೆಲ ಮಾಹಿತಿ ಪಡೆದಿದೆ.

೭. ಸವಣೂರಿನ ನವಾಬರು : ಪುಟ : ೩೯

೮. ಅದೇ ಪುಟ : ೨೬

೯. ಅದೇ ಪುಟ : ೨೬

# ೩. ಹಸ್ತಪ್ರತಿಗಳ ಸುಟ್ಟು ನಿಟ್ಟುಸಿರು ಬಿಡುವವರು

■ ಮು.ಹಾಲಪ್ಪ

ಪ್ರಾಚೀನರ ಜ್ಞಾನ ಶಾಸನಗಳಲ್ಲಿ, ತಾಳೆಗರಿ-ಹಸ್ತಪ್ರತಿಗಳಲ್ಲಿ, ದೇವಾಲಯ ಮತ್ತು ಗುಹಾಚಿತ್ರಗಳ ಕೆತ್ತನೆಯಲ್ಲಿ ಉಳಿದು ಬಂದಿರುವಂತೆ, ಮೌಖಿಕ ಪರಂಪರೆಯ ಮೂಲಕವೂ ಸಾಗಿ ಬಂದಿರುವುದನ್ನು ಕಾಣಬಹುದಾಗಿದೆ. ಈ ಜ್ಞಾನವನ್ನು ಆಧುನಿಕ ಸಂದರ್ಭದಲ್ಲಿ ವ್ಯವಸ್ಥಿತವಾಗಿ ಸಂರಕ್ಷಿಸಬೇಕಾಗಿದೆ ಮತ್ತು ದಾಖಲಿಸ ಬೇಕಾಗಿದೆ. ಆ ನಿಟ್ಟಿನಲ್ಲಿ ನಡೆದಿರುವ ಕಾರ್ಯ ಶ್ಲಾಘನೀಯ ವಾದರೂ ಆಗಬೇಕಾಗಿರುವುದು ಸಾಕಷ್ಟಿದೆ ಎನ್ನುವುದನ್ನು ನಾವು ಮರೆಯುವಂತಿಲ್ಲ.

ನಿರ್ದಿಷ್ಟ ಜಿಲ್ಲೆಯೊಂದರಲ್ಲಿ ಜನಪದ ವೈದ್ಯವನ್ನು ಕುರಿತು ಕ್ಷೇತ್ರಾಧ್ಯಯನ ಮಾಡುತ್ತಿರುವ ನನಗೆ, ಕ್ಷೇತ್ರದಲ್ಲಿ ಕಂಡುಬಂದ ಸಂಗತಿಯೆಂದರೆ, ತಾಳೆಗರಿಗಳು, ತಾಮ್ರಶಾಸನಗಳು ಮತ್ತು ಹಸ್ತಪ್ರತಿಗಳು ಜನರ ಮೂಢನಂಬಿಕೆಯಿಂದಾಗಿ ನೀರು ಪಾಲಾದ, ಬೆಂಕಿಗೆ ಆಹಾರವಾದ ಇಲ್ಲವೆ ತಿಪ್ಪೆಗೆ ಗೊಬ್ಬರವಾದ ಘಟನೆಗಳು ನನ್ನನ್ನು ಮೂಕವಿಸ್ಮಿತನನ್ನಾಗಿಸಿವೆ. ಹೀಗೆ ನಾಶವಾಗುತ್ತಿರುವವುಗಳಲ್ಲಿ ಹೆಚ್ಚಿನವು ವೈದ್ಯಶಾಸ್ತ್ರ ಹಾಗೂ ಯಂತ್ರ - ಮಂತ್ರಗಳಿಗೆ ಸಂಬಂಧಿಸಿದವು ಎನ್ನುವುದು ಮುಖ್ಯವಾದ ವಿಚಾರ. ವೈದ್ಯಶಾಸ್ತ್ರ ವೆಂಬುದು ಜೀವಸಂಕುಲದ ಮೂಲಭೂತ ಅಗತ್ಯಗಳಲ್ಲಿ ಒಂದು, ಇದನ್ನೇ ಬೆಂಕಿ, ನೀರುಗಳಿಗೆ ಎಸೆಯುತ್ತಿರುವುದು ಅತ್ಯಂತ ಬೇಸರ ತರಿಸುವ ಕೃತ್ಯವಾಗಿದೆ.

ಸಂಸ್ಕೃತದಲ್ಲಿ ಪಾರಂಪರಿಕ ವೈದ್ಯವನ್ನು ಕುರಿತು ಹಲವು ಬಗೆಯ ಪ್ರಾಚೀನ ಗ್ರಂಥಗಳಿವೆ. ಅಂಥವುಗಳನ್ನು ಆಕರ ವಾಗಿಟ್ಟುಕೊಂಡು ಕನ್ನಡದಲ್ಲಿ ರಚಿಸಿದ ಕೀರ್ತಿವರ್ಮನ 'ಗೋವೈದ್ಯ'ವೇ ಮೊದಲ ಕೃತಿ (ಸು.ಕ್ರಿ.ಶ. ೧೧೨೫). ಜಗದ್ದಳ

ಸೋಮನಾಥನ 'ಕಲ್ಯಾಣಕಾರಕ' (ಸು.ಕ್ರಿ.ಶ.೧೧೭೫), ಒಂದನೆಯ ಮಂಗರಸನ 'ಖಗೇಂದ್ರ ಮಣಿ ದರ್ಪಣ' (ಕ್ರಿ.ಶ. ೧೩೬೦), ಇವುಗಳ ಜೊತೆಗೆ ಅಭಿನವಚಂದ್ರನ 'ಹಯಶಾಸ್ತ್ರ', ದೇವೇಂದ್ರ ಮುನಿಯ 'ಬಾಲಗ್ರಹ ಚಿಕಿತ್ಸೆ', ಅಮೃತ ನಂದಿಯ 'ವೈದ್ಯಕ ನಿಘಂಟು', ವೀರ ರಾಜೇಂದ್ರನ 'ಸಕಲ ವೈದ್ಯ ಸಂಹಿತಾ ಸಾರಾರ್ಣವ', ಶ್ರೀಧರದೇವನ 'ವೈದ್ಯಶಾಸ್ತ್ರ', ಸಾಳ್ವಕವಿಯ 'ವೈದ್ಯಸಾಂಗತ್ಯ', ಚನ್ನರಾಜ 'ವೈದ್ಯಸಾರಸಂಗ್ರಹ', ವೀರಭದ್ರರಾಜನ 'ಹಸ್ತ್ಯಾಯುರ್ವೇದ', 'ಬ್ರಹ್ಮ ವೈದ್ಯಕಂದ', ತಿಮ್ಮರಾಜಗೌಡ 'ಸ್ತ್ರೀವೈದ್ಯ' ಮೊದಲಾದವು ಸುಪ್ರಸಿದ್ಧ ವೈದ್ಯಗ್ರಂಥಗಳು.

ವಿವಿಧ ಶಾಸ್ತ್ರಗಳನ್ನು ಪರಿಚಯಿಸುವ ಸಂಕಲನ ಗ್ರಂಥಗಳಾದ ಚಾವುಂಡರಾಯನ 'ಲೋಕೋಪಕಾರ', ಕುಮುದೇಂದು ಕವಿಯ 'ಸಿರಿಭೂವಲಯ', ನಿಜಗುಣ ಶಿವಯೋಗಿಗಳ 'ವಿವೇಕ ಚಿಂತಾಮಣಿ', ಇನ್ನೊಂದು ರೀತಿಯ ಕೃತಿಗಳಾದ 'ಕಂಠೀರವ ನರಸರಾಜವಿಜಯ', 'ಶಿವತತ್ವರತ್ನಾಕರ', ಮತ್ತು 'ಕೆಳದಿ ನೃಪವಿಜಯ' ಮುಂತಾದವು ಇತಿಹಾಸ, ಸಾಮಾಜಿಕ ಅಥವಾ ಧಾರ್ಮಿಕ ಸಂಗತಿಗಳನ್ನು ಹೇಳುವುದರೊಂದಿಗೆ ವೈದ್ಯವಿಚಾರವನ್ನೂ ಪ್ರಸ್ತಾಪಿಸುತ್ತವೆ. ವೈದ್ಯಗ್ರಂಥಗಳು ವೈದ್ಯಶಾಸ್ತ್ರದ ಅನುಭವ ಇರುವವರು ಹಾಗೂ ಸ್ವತಃ ವೈದ್ಯರಾದವರಿಂದಲೇ ರಚನೆಯಾಗಿರುತ್ತವೆ ಎನ್ನಬಹುದು. ಇಂತಹ ಅನುಭವಿಗಳು ಗ್ರಂಥ ರಚಿಸುವಾಗ ಮೂಲ ಮಾಹಿತಿಯೊಂದಿಗೆ ಜನಪದ ವೈದ್ಯದ ವಿವರಗಳನ್ನೂ ಅದರಲ್ಲಿ ಸೇರಿಸಿರುತ್ತಾರೆ ಎಂದರೆ ತಪ್ಪಾಗಲಾರದು. ಉದಾಹರಣೆಗೆ : 'ಗರ್ಭನಿಲ್ಲಲು, ಕ್ಷಯ, ಕುಷ್ಠ, ಕಾಲರಾ, ಹಾವಿನ ವಿಷ ಮೊದಲಾದವುಗಳಿಗೆ ಚಾವುಂಡರಾಯ ಆಯುರ್ವೇದ ಶಾಸ್ತ್ರದ ಮೂಲ ಸಿದ್ಧಾಂತಗಳು, ಚಿಕಿತ್ಸಾಕ್ರಮಗಳು ಇತ್ಯಾದಿ ಶಾಸ್ತ್ರೀಯ ವಿವರಣೆಗಳಾವುವನ್ನೂ ಕೊಟ್ಟಿಲ್ಲ, ಬದಲಾಗಿ ಅನುಭವ ರೂಪವಾದ ಔಷಧ ಯೋಗಗಳನ್ನು ಮಾತ್ರ ತಿಳಿಸಲಾಗಿದೆ'. (ಪುಟ-೩೮೦, 'ಚಾವುಂಡರಾಯನ ಲೋಕೋಪಕಾರ : ಒಂದು ಅಧ್ಯಯನ : ೧೯೯೭, ಡಾ.ಎ. ರಂಗಸ್ವಾಮಿ) ಇದನ್ನೆಲ್ಲ ಗಮನಿಸಿದಾಗ ಬಹುಶಃ ಪೂರ್ಣಪ್ರಮಾಣದಲ್ಲಿ ಜನಪದ ವೈದ್ಯವನ್ನೇ ಕುರಿತಾದ ಕೃತಿಗಳು ನಿರ್ಮಾಣವಾಗಿರಬಹುದೆ? ಅವು ಈಗಲೂ ಹಸ್ತಪ್ರತಿ ರೂಪದಲ್ಲಿ ಇರಬಹುದೆ ಎಂಬ ಸಂದೇಹ ಬರುತ್ತದೆ. ಏಕೆಂದರೆ ಕ್ಷೇತ್ರದಲ್ಲಿ ಬಹುತೇಕ ವೈದ್ಯರು ಈಗಲೂ ಕೈಬರಹಗಳನ್ನಿಟ್ಟುಕೊಂಡಿದ್ದಾರೆ. ಇವು ಅನುಕರಣೆಯವೋ, ಅಳವಡಿಕೆಯವೋ ಅಥವಾ ಜನಪದ ವೈದ್ಯರಿಂದಲೇ ನಿರ್ಮಾಣವಾದವೋ ಎಂಬುದನ್ನು ಸಂಶೋಧನೆಯಿಂದ ಖಚಿತ ಪಡಿಸಿಕೊಳ್ಳಬೇಕಾಗಿದೆ.

ಈ ಮೇಲಿನ ಸ್ಥೂಲ ಮಾಹಿತಿಯಿಂದ ತಿಳಿಯುವುದೇನೆಂದರೆ, ಲಿಖಿತ ರೂಪದ ವೈದ್ಯಶಾಸ್ತ್ರವೇ ನಿರೀಕ್ಷೆಯ ಮಟ್ಟದಲ್ಲಿ ಅಧ್ಯಯನಕ್ಕೊಳಪಟ್ಟಿಲ್ಲ ಎಂಬುದು. ಇನ್ನೂ ಜನಪದ ವೈದ್ಯದ ಪರಿಸ್ಥಿತಿ ಚಿಂತಾಜನಕವಾದುದು. ಅಲ್ಲೊಂದು ಇಲ್ಲೊಂದು ಸಂಗ್ರಹಗಳನ್ನು ಬಿಟ್ಟರೆ, ವಂಶ ಪಾರಂಪರ್ಯವಾಗಿ ವೈದ್ಯ ಮಾಡುತ್ತಾ ಬರುವವರ ಬಳಿ ಇರುವ ಕೈಬರಹಗಳಾಗಲಿ, ಹಸ್ತಪ್ರತಿಗಳಾಗಲಿ ಸಂಶೋಧನೆಯಿಂದ ಬಹುದೂರ ಉಳಿದಿವೆ ಮತ್ತು ಅಸಂಖ್ಯ ತಾಳೆಗರಿಗಳು ಹಾಗೂ ಕೈಬರಹಗಳು ನಾಶವಾಗಿವೆ. ಇಷ್ಟು ಮಾತ್ರವಲ್ಲ ಋಷಿ ಸಮಾನರಾದ ಅನುಭವಿವೈದ್ಯರು ಕಾಲಚಕ್ರದಲ್ಲಿ ಉರುಳಿಹೋಗಿದ್ದಾರೆ. ಅಂದರೆ ಅವರ ಬಹುಪಾಲು ವಿದ್ಯೆಯೂ ಅವರನ್ನು ಹಿಂಬಾಲಿಸಿದೆ.

ಕ್ಷೇತ್ರಾಧ್ಯಯನದ ಸಂದರ್ಭದಲ್ಲಿನ ಅನುಭವವನ್ನು ಹೇಳುವುದಾದರೆ, ವೈದ್ಯ ಅಥವ ಪಂಡಿತ ಸತ್ತ ನಂತರ ಆತನ ಎಲ್ಲಾ ಗ್ರಂಥಗಳನ್ನೂ ಮೂಟೆ ಸಮೇತ ಸುಡುವುದು ಆ ಕುಟುಂಬದವರ ಮೊದಲ ಕೆಲಸ. ಆ ಬಳಿಕವೆ ಅವರಿಗೆ ತೃಪ್ತಿ ಮತ್ತು ಒಂದು ಅನಿಷ್ಟ ತೊಲಗಿತು ಎಂಬ ಸಮಾಧಾನದ ನಿಟ್ಟುಸಿರು ಬಿಡುತ್ತಾರೆ. ಹೀಗಾಗಲು ಕೆಲವು ವೈದ್ಯರು ಜೀವಿತಾವಧಿಯಲ್ಲಿ ಮಾಡುತ್ತಿದ್ದ ಮಾಟ-ಮಂತ್ರಗಳೂ ಈ ತರದ ಕಾರ್ಯಕ್ಕೆ ಪ್ರೇರಣೆ ಯಾಗಿರಬಹುದು. ಇದರ ಜೊತೆಗೆ ಇವುಗಳಿರುವುದರಿಂದ 'ಕುಟುಂಬಕ್ಕೆ ಕೇಡು' ಎಂಬ ತಪ್ಪು ತಿಳಿವಳಿಕೆಯೂ ಕಾರಣವಾಗಿದೆ. ಇದರ ಪರಿಣಾಮದಿಂದಾಗಿ ಶುದ್ಧ ವನಸ್ಪತಿಗಳಿಂದಲೇ ವೈದ್ಯಮಾಡುತ್ತಿದ್ದ ಎಷ್ಟೋ ಪಂಡಿತರ ಹಸ್ತಪ್ರತಿಗಳಿಗೂ ಇದೇ ಶಿಕ್ಷೆಯಾಗಿದೆ. ನಿಜಕ್ಕೂ ಹೀಗಾಗಬಾರದು, ಹಸ್ತಪ್ರತಿಗಳನ್ನು ನಾಶಮಾಡುವುದಕ್ಕೆ ವೈದ್ಯನ ಮನೆಯವರು ಹಾಗೂ ಸ್ಥಳೀಯರು ಕೊಡುವ ಕಾರಣಗಳು ಹೀಗಿವೆ:

ನಾನು ಸಂದರ್ಶಿಸಿದ ಬಹುತೇಕ ಕುಟುಂಬದವರು 'ಅಯ್ಯೋ ನಮ್ಮಜ್ಜ ಸತ್ತ್ ಕೂಡ್ಲೆ ಸುಟ್ಟುಬಿಟ್ವಿ', 'ನಮ್ಮಪ್ಪ ಹೋದ್ ಮ್ಯಾಲೆ ವೈದ್ಯ ಗಂಟನ್ನು ನದಿಗೆ ಎಸೆದ್ವಿ', 'ಮದ್ದು ಅರೆದವನ ಮನೆ ಮಧ್ಯಾಹ್ನಕ್ಕೆ ಲಯ' ಅಂತ ಗಾದೆನೆ ಹೇಳ್ಯಾತ್ರಿ, ಅದ್ಕೆ ತಿಪ್ಪೆಗೆ ಹಾಕಿದ್ವಿ' ಎಂದು ಉತ್ತರಿಸುವವರಲ್ಲಿ ಯಾವುದೇ ಪಶ್ಚತ್ತಾಪ ಇಲ್ಲದಿರುವುದನ್ನು ಕಂಡಿದ್ದೇನೆ, ಬದಲಾಗಿ ಅವರಲ್ಲಿ ತೃಪ್ತಿ ಇರುತ್ತದೆ. ಅವುಗಳ್ನು ಸುಟ್ಟುದ್ದು ಯಾಕೆ? ಎಂದು ಪ್ರಶ್ನಿಸಿದರೆ 'ನಮ್ಮ ಮನೆಯ ದನಗಳಿಗೆ ಖಾಯಿಲೆ ಬಂತು', 'ನಮ್ಮ ಮಗ ಮನೆ ಬಿಟ್ಟು ಹೋದ', 'ಹೊಲ್ದಾಗಿನ ಬೆಳೆ ಕೈಗೆ ಬರಲಿಲ್ಲ', 'ಮಕ್ಕಳ ಸಂತಾನ ಆಗಲಿಲ್ಲ', 'ಮನೆಯಲ್ಲಿ ಏನಾದ್ರೂ ಒಂದು ಕಾಟ ಕಾಡುತ್ತಿತ್ತು', 'ಅದ್ಕೆ ದೇವರನ್ನು ಕೇಳಿದ್ವಿ', ಅದು 'ನಿಮಜ್ಜನ ಪೆಟ್ಟಿಗೆಯನ್ನು ಹೊಳೆಗೆ ಹಾಕಿ' ಎಂದಿತು. 'ಊರಿನ ಜನಾನೂ ಅದು ಮನೆಯಲ್ಲಿದ್ರೆ ಒಳ್ಳೆಯದಲ್ಲ ಎಂದರು', 'ಆದ್ದರಿಂದ ಹಾಗೆ ಮಾಡಿದ್ವಿ' ಎಂಬಂತಹ ಮೂಢ ನಂಬಿಕೆಯ ಕಾರಣಗಳನ್ನು ಹೇಳಿ, 'ಈಗ ನೆಮ್ಮದಿಯಾಗಿದ್ದೇವೆ' ಎಂಬ ಭ್ರಮೆಯ ಉತ್ತರವನ್ನು ದೇಶಾವರಿ ನಗೆಯೊಂದಿಗೆ ಕೊಡುತ್ತಾರೆ. ಉದಾಹರಣೆಗೆ ಚಿತ್ರದುರ್ಗದಲ್ಲಿರುವ ಶಾಸನ ಹಾಗೂ ಹಸ್ತಪ್ರತಿಗಳ ಸಂಶೋಧಕ ಡಾ.ಬಿ. ರಾಜಶೇಖರಪ್ಪನವರೊಂದಿಗೆ ಮಾತನಾಡುವ ವೇಳೆಯಲ್ಲಿ ಇತ್ತೀಚಿನ ಘಟನೆಯೊಂದನ್ನು ಹೇಳಿದರು. ಹರಿಹರ ಭಾಗದ ಹಳ್ಳಿಯೊಂದರಲ್ಲಿ ಹಸ್ತಪ್ರತಿಗಳಿರುವ ಸಂಗತಿ ತಿಳಿದು, ಆ ಜಾಡನ್ನು ಹಿಡಿದು ಹೊರಟಾಗ ಹಸ್ತಪ್ರತಿಗಳಿದ್ದ ಮನೆಯ ವ್ಯಕ್ತಿ ಹೀಗೆಂದು ಹೇಳಿದ: 'ನಮ್ಮ ಮನ್ಯಾಗೆ ಶನಿಕಾಟ ಬಾಳ ಆಗಿತ್ರಿ, ಅದ್ಕೆ ದೇವರ್ನ ಕೇಳಿಸ್ಕೊಂಡು ಬಂದನಂತರ ಹರಿಹರದ ಹತ್ತಿರ ಇರೋ ಸೇತುವೆ ಮೇಲಿಂದ ನಡೋ ಹೊಳೆಗೆ ಹಾಕಿ ಬಂದೆ' ಎಂದು ಅವುಗಳನ್ನು ಎಸೆದ ವ್ಯಕ್ತಿಯಿಂದಲೇ ಕೇಳಿದಾಗ ಶ್ರೀಯುತರಿಗೆ ಹೇಗಾಗಿರಬೇಡ.

ಉದಾಹರಣೆಗಾಗಿ ಈ ಘಟನೆಯನ್ನು ಹೇಳಲಾಗಿದೆ. ಹೇಳದೆ ಉಳಿದಿರುವ ಘಟನೆಗಳು ಅಸಂಖ್ಯಾತವಾಗಿವೆ. ಪ್ರತಿ ಹತ್ತು ಹಳ್ಳಿಗಳಲ್ಲಿ ಕನಿಷ್ಟ ಒಂದು ಹಳ್ಳಿಯಲ್ಲಾದರೂ ಈ ತರದ ಘಟನೆಗಳನ್ನು ಕೇಳುವುದು ನನ್ನದಾಗಿದೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ವೈದ್ಯಕ್ಕೆ ಸಂಬಂಧಿಸಿದವು ಎಂದು ಹೇಳುವ ಹಸ್ತಪ್ರತಿಗಳನ್ನು ಕೆಲವು ಭಾಗದಲ್ಲಿ ಗಮನಿಸಿದ್ದೇನೆ. ಆ ದಾರಿಯಲ್ಲಿ ಸಂಶೋಧನೆ ಕೈಗೊಂಡಾಗ ಹೆಚ್ಚಿನ ಸಂಖ್ಯೆಯಲ್ಲಿ ದೊರೆಯಬಹುದು. ಇದರಿಂದ

ಆರೋಗ್ಯ ಕ್ಷೇತ್ರಕ್ಕೆ ಹೆಚ್ಚಿನ ಅನುಕೂಲವಿದೆ ಎಂಬುದರಲ್ಲಿ ಸಂದೇಹವಿಲ್ಲ. ಆದರೆ ಈ ಕಾರ್ಯಕ್ಕೆ ಕಾಲವಿಳಂಬ ಸಲ್ಲದು. ಹಾಗಾದರೆ ಯಾರು ತಕ್ಷಣಕ್ಕೆ ಕಾರ್ಯ ಪ್ರವೃತ್ತರಾಗಬೇಕು? ಇದಕ್ಕೆ ಉತ್ತರವನ್ನು ನಾವೇ ಕಂಡುಕೊಳ್ಳಬೇಕಾಗಿದೆ. ಅಂದರೆ ಸಂಬಂಧಿಸಿದ ಇಲಾಖೆ, ಆಯಾ ಭಾಗದ ವಿಶ್ವವಿದ್ಯಾಲಯಗಳು ಮತ್ತು ಸಾಹಿತ್ಯ ಹಾಗೂ ಸಂಸ್ಕೃತಿಗಳ ಸೇವೆಯಲ್ಲಿ ನಿರತವಾಗಿರುವ ಸೇವಾಸಂಸ್ಥೆಗಳು ಆ ನಿಟ್ಟಿನಲ್ಲಿ ಎಚ್ಚೆತ್ತುಕೊಂಡು ಇತರರನ್ನೂ ಎಚ್ಚರಿಸಬೇಕಾಗಿದೆ.

❒

# ೪. ಕನ್ನಡ ಕಾವ್ಯಗಳಲ್ಲಿ ದೇಶಭಕ್ತಿ

■ ದಿ. ಟಿ. ಕೇಶವ ಭಟ್ಟ

ಮಾನವನು ತನ್ನ ಜೀವನದಲ್ಲಿ ಸಾಧಿಸಬೇಕಾದುದು ಏನನ್ನು? ಎಂಬ ಪ್ರಶ್ನೆಗೆ ಉತ್ತರವಾಗಿ ಭಾರತೀಯ ದಾರ್ಶನಿಕರು ಅತಿ ಪ್ರಾಚೀನ ಕಾಲದಲ್ಲೇ– 'ಅಭ್ಯುದಯವನ್ನು ಮತ್ತು ನಿಃಶ್ರೇಯಸವನ್ನು' ಎಂಬುದಾಗಿ ಹೇಳಿದ್ದಾರೆ. ಇವೆರಡೂ ಧರ್ಮದ ಲಕ್ಷಣಗಳಂತಲೂ ತಿಳಿಸಿದ್ದಾರೆ. ಅಭ್ಯುದಯವೆಂದರೆ ಬದುಕಿರುವಾಗಲೇ ಗಳಿಸತಕ್ಕ ಸಮುನ್ನತಿ. ನಿಃಶ್ರೇಯಸವೆಂದರೆ ಅಭ್ಯುದಯದ ಪರಿಣಾಮವಾಗಿ ಪ್ರಾಪ್ತವಾಗುವ ಮೋಕ್ಷ. ಅಭ್ಯುದಯವೆಂಬುದು ವೈಯಕ್ತಿಕವೂ ಸಾಮಾಜಿಕವೂ ಆಗಿದ್ದು ದೇಶಭಕ್ತಿಯೂ ಅದಕ್ಕಿರುವ ಒಂದು ಮುಖ್ಯ ಸಾಧನವಾಗಿದೆ. ದೇಶಭಕ್ತಿ ಎಂದರೆ ಭೌಗೋಲಿಕವಾಗಿ ಮಾತ್ರವೇ ದೇಶವನ್ನು ಪ್ರೀತಿಸುವುದಲ್ಲ. ಅದರೊಂದಿಗೆ ದೇಶದ ಧರ್ಮ, ಸಂಸ್ಕೃತಿ, ನೀತಿ, ಭಾಷೆ, ಸಾಹಿತ್ಯ, ಜನತೆ – ಇವೆಲ್ಲವನ್ನೂ ಒಂದಕ್ಕೊಂದು ಪೋಷಕವಾಗುವಂತೆ ಪ್ರೀತಿಸುತ್ತ ಕಾರ್ಯಮಗ್ನವಾಗಿ ಇರುವುದಾಗುತ್ತದೆ.

ಇಂದಿನ ವಿಚಾರಶೀಲರಲ್ಲಿ ಅನೇಕರು ಬಾರತೀಯರಿಗೆ ದೇಶಭಕ್ತಿಯೇ ಇರಲಿಲ್ಲ, ರಾಷ್ಟ್ರಭಾವನೆಯೇ ಹೊಸತು, ಅವು ನಮಗೆ ಪಾಶ್ಚಾತ್ಯರ ಕೊಡುಗೆ–ಎನ್ನುವುದುಂಟು. ಇದರ ನಿಜಸ್ಥಿತಿಯನ್ನು ತಿಳಿಯಪಡಿಸಿ, ಕನ್ನಡ ಕಾವ್ಯಸಾಹಿತ್ಯದಲ್ಲಿ ಅದನ್ನು ತೋರಿಸಿಕೊಡುವ ಪ್ರಯತ್ನವೇ ಈ ಲೇಖನೋದ್ದೇಶವಾಗಿದೆ.

ನಮಗೆ (ಭಾರತೀಯರಿಗೆ) ದೇಶಭಕ್ತಿ ರಾಷ್ಟ್ರಭಾವನೆಗಳು ವೇದದಷ್ಟೇ ಪ್ರಾಚೀನವಾಗಿವೆ. ವೇದಗಳಲ್ಲಿ ಅತಿಪ್ರಾಚೀನವೆನಿಸುವ ಋಗ್ವೇದದಲ್ಲಿ ಬರುವ ಶ್ರೀಸೂಕ್ತದ ಏಳನೆಯ ಮಂತ್ರದಲ್ಲಿ ಈ ವಾಕ್ಯವಿದೆ –

"ಪ್ರಾದುರ್ಭೂತೋಽಸ್ಮಿ ರಾಷ್ಟ್ರೇಽಸ್ಮಿನ್ ಕೀರ್ತಿಮೃದ್ಧಿಂ ದದಾತು ಮೇ" ಅಂದರೆ ಎಲೈ ಲಕ್ಷ್ಮಿಯೇ, ನಾನು ಈ ರಾಷ್ಟ್ರದಲ್ಲಿ

ಜನ್ಮತಾಳಿರುತ್ತೇನೆ. ನನಗೆ ಇಲ್ಲಿ ಕೀರ್ತಿಯನ್ನೂ ಸಮೃದ್ಧಿಯನ್ನೂ ದಯಪಾಲಿಸುವಂತಾಗಲಿ! – ಎಂದಿಲ್ಲಿ ಹೇಳಲಾಗಿದೆ. ಹೀಗೆ ರಾಷ್ಟ್ರದ ಉಲ್ಲೇಖಗಳಿರುವ ವೇದಮಂತ್ರಗಳು ಎಷ್ಟೋ ಇವೆ. ಇನ್ನು ದೇಶಭಕ್ತಿ ವಿಚಾರವಾಗಿ ಹೇಳುವುದಾದರೆ – ಅಥರ್ವವೇದದ ಹನ್ನೆರಡನೆಯ ಕಾಂಡದಲ್ಲಿ ಪ್ರಥಮವಾಗಿ ಅರುವತ್ತಮೂರು ಮಂತ್ರಗಳಿರುವ ಪೃಥ್ವೀಸೂಕ್ತವನ್ನು ಕಾಣಬಹುದು. ನಮ್ಮ ಪೂರ್ವಿಕರಿಗಿದ್ದ ಗಾಢವಾದ ದೇಶಭಕ್ತಿಗೆ ಇದೊಂದು ಉದಾಹರಣೆ. ಇದನ್ನು ನೋಡಿದರೆ, ಬಂಕಿಂಚಂದ್ರರಿಗೆ 'ವಂದೇ ಮಾತರಂ' ಎಂಬ ರಾಷ್ಟ್ರಗೀತೆಯನ್ನು ರಚಿಸಲು ಇದರಿಂದಲೇ ಭಾವಪ್ರಚೋದನೆಯಾಗಿರಬೇಕು ಎನಿಸುತ್ತದೆ.

ಭಗವದ್ಗೀತೆಯಲ್ಲಿ ಶ್ರೀಕೃಷ್ಣನು–'ಧರ್ಮಕ್ಕೆ ಗ್ಲಾನಿಯಾದಾಗ, ಅಧರ್ಮವು ಹೆಚ್ಚಾದಾಗ ದುಷ್ಟರ ನಾಶಕ್ಕಾಗಿ ಮತ್ತು ಶಿಷ್ಟರ ರಕ್ಷಣೆಗಾಗಿ ನಾನೇ ಅವತರಿಸಿ ಬರುತ್ತೇನೆ, ಎಂದಿರುವುದು ಅವನ ದೇಶ ಭಕ್ತಿಯ ಅಭಿವ್ಯಕ್ತಿಯಾಗಿಯೇ ಕಂಡುಬರುವುದಲ್ಲವೆ? ತ್ರೇತಾಯುಗದಲ್ಲಿದ್ದ ಶ್ರೀರಾಮನು ಉನ್ನತ ದೇಶಭಕ್ತನಾಗಿದ್ದನೆಂಬುದಕ್ಕೆ ಆಧಾರವಿದೆ. ರಾವಣನ ವಧೆಯಾಗಿ, ಅವನ ಲಂಕೆಯೇ ವಶವಾದಾಗ, ಲಕ್ಷ್ಮಣನು ಈ ಸ್ವರ್ಣಮಯವಾದ ಲಂಕೆಯನ್ನೇ ರಾಜಧಾನಿಯಾಗಿ ಮಾಡಿಕೊಂಡು ಭೂಮಂಡಲವನ್ನು ಆಳಬಹುದೆಂಬ ಸೂಚನೆಯಿತ್ತನೆಂದು ತೋರುತ್ತದೆ. ಆಗ ಶ್ರೀರಾಮನ ಅಭಿವ್ಯಕ್ತಿ ಹೀಗಿದೆ–

"ಅಪಿ ಸ್ವರ್ಣಮಯೀ ಲಂಕಾ ನ ಮೇ ಲಕ್ಷ್ಮಣ ರೋಚತೆ।
ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸಿ ।

ಅಂದರೆ ಎಲೈ ಲಕ್ಷ್ಮಣ, ಈ ಲಂಕೆ ಸ್ವರ್ಣಮಯವಾಗಿದ್ದರೂ ನನಗೇನೂ ರುಚಿಸದು. ಜನ್ಮಕೊಟ್ಟ ತಾಯಿ ಮತ್ತು ಜನ್ಮಭೂಮಿ ಎಂಬವೆರಡೂ ಸ್ವರ್ಗಕ್ಕಿಂತ ಮಿಗಿಲು. ರಾಮನು ಅಂತಹ ಲಂಕೆಗೆ ಆಸೆ ಪಡದೆ, ಅದನ್ನು ವಿಭೀಷಣನಿಗೆ ಬಿಟ್ಟು ತಾನು ತನ್ನ ಹುಟ್ಟೂರಾದ ಅಯೋಧ್ಯೆಗೆ ಹೋಗಿ ಅಲ್ಲಿದ್ದು ಆದರ್ಶ ರೀತಿಯಲ್ಲಿ ರಾಜ್ಯವಾಳಿದನೆಂದು ರಾಮಾಯಣವಲ್ಲಿ ಹೇಳಿದೆ. ಈಗಲೂ ಅಂತಹ ಅಯೋಧ್ಯೆಯಲ್ಲಿ ರಾಮಮಂದಿರವಿರಬೇಕೆಂಬುದು ಇಂದಿನ ದೇಶ ಭಕ್ತರ ವಾಂಛಿತವಾಗಿರುವುದು ಪ್ರಶಂಸಾರ್ಹ. ಇನ್ನೀಗ ಕನ್ನಡ ಕಾವ್ಯಗಳಲ್ಲಿ ಉದಾಹರಣೆಗಳನ್ನು ನೋಡೋಣ.

ಹಿಂದೆ ಹೇಳಿದಂತೆ, ದೇಶಭಕ್ತಿಯೆಂಬುದು, ಅಂತಹ ಭೂಭಾಗದ ಮೇಲಣ ಭಕ್ತಿ ಪ್ರೇಮ ಮಾತ್ರವಾಗಿರದೆ, ದೇಶದ ಸಮಗ್ರತೆಯೊಂದಿಗೆ ಆ ಭಾಗದ ಜನರು ಸಂಸ್ಕೃತಿಯ, ಭಾಷೆ–ಸಾಹಿತ್ಯಗಳ ಪ್ರೇಮಗಳೂ ಅದರಲ್ಲಿ ಅಂತರ್ಗತವಾಗಿರುತ್ತವೆ ಎಂದರಿಯಬೇಕು. ಕನ್ನಡದ ಪ್ರಥಮ ಲಾಕ್ಷಣಿಕ ಕೃತಿಯಾಗಿರುವ ಕವಿರಾಜಮಾರ್ಗವಲ್ಲಿ (ಕ್ರಿ.ಶ.೮೬೦) ಕನ್ನಡಿಗರ ಹಿರಿಮೆಯನ್ನು ಸಾಂಸ್ಕೃತಿಕವಾಗಿ ಕೊಂಡಾಡಲಾಗಿದೆ.

ಪದನಱಿದು ನುಡಿಯಲುಂ ನುಡಿ
ದುದನಱಿದಾರಯಲುಮಾರ್ತರಾ ನಾಡವರ್ಗಳ್
ಚದುರರ್ ನಿಜದಿಂ ಕುಱಿತೋ
ದದೆಯುಂ ಕಾವ್ಯಪ್ರಯೋಗ ಪರಿಣತ ಮತಿಗಳ್ (೧–೩೮)

ಕನ್ನಡಿಗರು ಹದವರಿತು ಮಾತಾಡತಕ್ಕವರು. ಇತರರು ನುಡಿದುದನ್ನು ಅರ್ಥಮಾಡಿಕೊಂಡು ವಿಮರ್ಶಿಸತಕ್ಕವರು. ನಿಜವಾಗಿಯೂ ಚತುರರು. ಪದವಿಯನ್ನೋ ಪ್ರಮಾಣ ಪತ್ರವನ್ನೋ ಪಡೆಯುವ ಉದ್ದೇಶವಿಟ್ಟು ಓದಿದವರಲ್ಲವಾದರೂ ಕಾವ್ಯರಚನಾ ಪ್ರವೀಣರು. ಅಷ್ಟು ಮಾತ್ರವಲ್ಲ–

ಸುಭಟರ್ಕಳ್ ಕವಿಗಳ್ ಸು
ಪ್ರಭುಗಳ್ ಚಲ್ವಿರ್ಕಳಭಿಜನರ್ಕಳ್ ಗುಣಿಗಳ್
ಅಭಿಮಾನಿಗಳತ್ಯುಗ್ರರ್
ಗಭೀರಚಿತ್ತರ್ ವಿವೇಕಿಗಳ್ ನಾಡವರ್ಗಳ್ (೨–೩೮)

ಈ ವಿವರದಲ್ಲಿ ಜನರ ಬಗ್ಗೆ ಮೆಚ್ಚುಗೆಯನ್ನು ಹೇಳುವುದರಲ್ಲಿ ಕವಿಯ ದೇಶಭಕ್ತಿ ಭಾವನೆ ಇದೆಯಲ್ಲದೆ, ಕನ್ನಡಿಗರಾದ ನಾವು ಇಂದು ಕೂಡ ಹೀಗಿರಬೇಕೆಂಬ ಧ್ವನಿ ಇದರಲ್ಲಿ ಅಡಗಿದೆಯೆನ್ನಬಹುದು.

ಕನ್ನಡದ ಆದಿಕವಿ ಪಂಪನು ದಿಗ್ವಿಜಯಿಯಾದ ವಿಕ್ರಮಾರ್ಜುನನ ಮಾತುಗಳಾಗಿರುವ ನಾಲ್ಕು ಪದ್ಯಗಳಲ್ಲಿ ತೆಂಕನಾಡನ್ನು–ಅಂದರೆ ಬನವಾಸಿ ಪ್ರದೇಶವನ್ನು, ವರ್ಣಿಸುವಲ್ಲಿ (ಆ.೪. ಪದ್ಯ ೨೮–೩೧) ತನ್ನದೇಶಭಕ್ತಿ ಭಾವವನ್ನು ಕ್ರೋಢೀಕರಿಸಿದ್ದಾನೆ. ಅವುಗಳಿಂದಾಯ್ದ ಒಂದು ಪದ್ಯವಿದು–

ಜಾಗದ ಭೋಗದಕ್ಕರದ ಗೇಯದ ಗೊಟ್ಟಿಯಲಂಪಿನಿಂಪುಗ
ಳ್ಗಾಗರ ಮಾದ ಮಾನಿಸರೆ ಮಾನಿಸರಂತವರಾಗಿಯೆ ಪುಟ್ಟಲೇ
ನಾಗಿಯುಮೇನೊ ತೀರ್ದಪುದೆ ತೀರದೊಡಂ ಮಱಿದುಂಬಿಯಾಗಿ ಮೇಣ್
ಕೋಗಿಲೆಯಾಗಿ ಪುಟ್ಟುವುದು ನಂದನದೊಳ್ ಬನವಾಸಿದೇಶದೊಳ್ ॥ (೪–೨೯)

ಬನವಾಸಿ ಎಂಬುದೊಂದು ಊರಾಗಿದ್ದರೂ ಪಂಪನು ಬನವಾಸಿ ದೇಶ ಎಂದು ಹೇಳುವ ಮೂಲಕ ಅನೇಕ ಗುಡ್ಡ ಬೆಟ್ಟಗಳನ್ನೂ ಉದ್ಯಾನಗಳನ್ನೂ ಲಕ್ಷ್ಯವಿಟ್ಟು ವಿಶಾಲಕರ್ನಾಟಕ ವನ್ನು ಅಥವಾ ಭಾರತದೇಶವನ್ನೇ ಉದ್ದೇಶಿಸಿ ಹೇಳಿರುವನೆಂದು ಭಾವಿಸಬಹುದಾಗಿದೆ. ಇಲ್ಲಿ ಹುಟ್ಟುವುದೇ ಮಹಾಭಾಗ್ಯವೆಂದು ಉಗ್ಗಡಿಸಿದ್ದಾನೆ! 'ಆರಂಕುಸವಿಟ್ಟೊಡಂ ನೆನವುದೆನ್ನ ಮನಂ ಬನವಾಸಿ ದೇಶಮಂ' ಎಂಬ ಮಾತಿನಿಂದ ಕವಿಯ ದೇಶಭಕ್ತಿಯ ಪಾರಮ್ಯ ಅಭಿವ್ಯಕ್ತವಾಗಿದೆ.

ಶ್ರೀರಾಮನ ದೇಶಭಕ್ತಿ ವ್ಯಕ್ತವಾಗುವ ಕನ್ನಡ ಕಾವ್ಯವಾಗಿ ದೇವಪ್ಪಕವಿಯ 'ರಾಮವಿಜಯ' ಎಂಬ ಸಾಂಗತ್ಯ ಕಾವ್ಯವಿದೆ. ಕವಿಯ ಕಾಲ–ಕ್ರಿ.ಶ. ೧೫೨೫. ಈ ಕಾವ್ಯವು ನನ್ನಿಂದ ಸಂಪಾದಿತವಾಗಿ ಭಾರತೀಯ ಜ್ಞಾನಪೀಠದಿಂದ ೧೯೭೬ರಲ್ಲಿ ಪ್ರಕಾಶಿತವಾಗಿದೆ. ಸೀತಾವಿವಾಹಾನಂತರ ಶ್ರೀರಾಮನು ಅಯೋಧ್ಯೆಯಲ್ಲಿದ್ದಾಗ ಒಮ್ಮೆ, ಓರ್ವ ಕುಲವೃದ್ಧನಿಂದ ತನ್ನ ಕುಲದ ಪೂರ್ವವೃತ್ತಾಂತವನ್ನು ಆಲಿಸುತ್ತಿದ್ದನು. ಇನ್ನೂ ಸ್ಪಷ್ಟೀಕರಣಕ್ಕಾಗಿ ತನ್ನ ತಂದೆಯ ಬಳಿಗೆ ಬಂದನು. "ಎಲೈ ಪಿತೃದೇವನೇ, ನಮ್ಮ ಪೂರ್ವಜರ ಪಟ್ಟಣವು ಯಾವುದು? ಅಲ್ಲಿ ಈಗ ಯಾರಿದ್ದಾರೆ?" ಎಂದು ಪ್ರಶ್ನಿಸಿದನು. ಆಗ ದಶರಥನು – "ನಮ್ಮ ಪೂರ್ವಕಾಲದ

ಪಟ್ಟಣವು ವಾರಣಾಸಿ. ಅಲ್ಲಿ ಈಗ ದಾಯವಾದಿಯಾದ ಜಯಸೇನನು ಆಳುತ್ತಿದ್ದಾನೆ. ನಾವು ಅದನ್ನು ಅವನಿಗೆ ಬಿಟ್ಟಿದ್ದೇವೆ. ನಮಗೀಗ ಈ ಸಾಕೇತವೇ ಜನ್ಮಭೂಮಿಯಂತೆ ಸುಖಕರವಾಗಿದೆ" ಎಂದನು. ರಾಮನಿಗೆ ಇದು ಸಹ್ಯವಾಗಲಿಲ್ಲ. ಅವನಲ್ಲಿದ್ದ ದೇಶಭಕ್ತಿ ಭಾವರಸ ಹೊನಲಾಗಿ ಮಾತಿನ ಮೂಲಕ ಹೀಗೆ ಹರಿಯಿತು (ಆ.೯-೧೨-೧೩)

ಜನಪತಿಯನು ಗುರುವನು ನಿಜಜನನಿಯ
ಜನಕನ ಜನ್ಮಭೂಮಿಯನು
ಮನವೊಲಿದುಳಿದವರುಂಟೆ ಬಿನ್ನಪವಿದ
ಜನನಾಥ ಲಾಲಿಪುದೆನುತ ॥ (೯-೧೨)
ಏತರ ಜಸವೇತರ ಭುಜಬಲ ನಮ
ಗೇತರ ಜಯವೇತರಿರವು
ಏತರ ವೀರವಾ ಪುರವನು ದಾಯಾದ್ಯ
ರೀ ತರದೊಳಗಾಳುತಿರಲು ॥ (೯-೧೩)

ಸ್ವತಃ ಜೈನನಾಗಿದ್ದು ಜಿನೇಶನನ್ನು ತ್ಯಜಿಸಲಾಗುತ್ತದೆಯೆ? ಗುರುವನ್ನು ಬಿಟ್ಟು ಬಿಡಲಾಗುವುದೆ? ತಂದೆ-ತಾಯಿಯರನ್ನು ಬಿಟ್ಟು ಬೇರೆ ತಂದೆ – ತಾಯಿಗಳನ್ನು ಪಡೆಯಲು ಸಾಧ್ಯವಿದೆಯೆ? ಜನ್ಮಭೂಮಿಯನ್ನು ತ್ಯಜಿಸುವುದೆಂಬುದು ಹೀಗೆಯೇ ಆಗುವುದು. ಅದು ತ್ಯಾಗದ ಲಕ್ಷಣವಲ್ಲ – ಎಂಬ ಮಾರ್ಮಿಕವಾದ ಅಭಿಪ್ರಾಯ ರಾಮನ ಮಾತಿನಲ್ಲಿ ಬಂದಿದೆ.

ಹೀಗೆಂದ ರಾಮನು ಮುಂದುವರಿದು "ನಾನು ಆ ದಾಯಾದಿಯ ಸೊಕ್ಕನ್ನು ಮುರಿದು ಅವನನ್ನು ಸೆರೆ ಹಿಡಿದು ತಂದು ನಿನಗೊಪ್ಪಿಸುವೆನು. ಆ ಪಟ್ಟಣವನ್ನು ವಶಪಡಿಸುವೆನು ಎಂದು ಹೇಳಿ ತಂದೆಯ ಅನುಜ್ಞೆಯನ್ನು ಪಡೆದು ಲಕ್ಷ್ಮಣಸಹಿತ ಸೈನ್ಯದೊಂದಿಗೆ ಹೋದಾಗ, ಆ ಜಯಸೇನನು ಯುದ್ಧಕ್ಕೆ ಸನ್ನದ್ಧನಾದರೂ ತನ್ನ ಮಂತ್ರಿಯ ಹಿತೋಕ್ತಿಗೆ ಮಣಿದು ಶರಣಾದನು. ಹೀಗೆ ಈ ಕಾವ್ಯದಲ್ಲಿ ಶ್ರೀರಾಮನ ದೇಶ ಭಕ್ತಿ ಉಜ್ವಲವಾಗಿ ಚಿತ್ರಿತವಾಗಿದೆ.

ಕನ್ನಡಿಗರಲ್ಲಿ ಮಾತೃಭೂಮಿಯ ಮೇಲಣ ಭಕ್ತಿ ಬದುಕಿನಲ್ಲಿ ಹಾಸುಹೊಕ್ಕಾಗಿದೆ ಎಂಬುದಕ್ಕೆ ಜನಪದ ಗೀತೆಗಳೇ ಆಧಾರವಾಗಿವೆ. ಬೆಳಗ್ಗೆ ಎದ್ದೊಡನೆ ಸ್ಮರಿಸಬೇಕಾದುದು ಮೊತ್ತಮೊದಲು ಭೂಮಾತೆಯನ್ನು. ಅಂತಹ ತ್ರಿಪದಿ ಪದ್ಯವಿದು –

ಬೆಳಗಾಗಿ ನಾನೆದ್ದು ಯಾರ್ಯಾರ ನೆನೆಯಲಿ
ಎಳ್ಳುಜೀರಿಗೆಯ ಬೆಳೆಯೋಳ – ಭೂಮಿತಾಯ
ಎದ್ದೊಂದು ಗಳಿಗೇ – ನೆನೆದೇನು

ಇದೇ ದೇಶಭಕ್ತಿ ಭಾವನೆ ಅಖಿಳ ಭಾರತೀಯವಾಗಿ ಸಂಸ್ಕೃತದಲ್ಲಿಯೂ ಕಾಣಿಸುತ್ತಿದೆ. ಅದರಂತೆ ಭಾರತೀಯನು ಎದ್ದೊಡನೆ ಕರದರ್ಶನ ಮಾಡುವನು. ಒಡನೆಯೇ ಹೆಜ್ಜೆಯನ್ನು ನೆಲದ ಮೇಲಿಡುತ್ತ ಕ್ಷಮಾಯಾಚನೆ ಮಾಡುವನು – ಆ ಶ್ಲೋಕಗಳಿವು –

ಕರಾಗ್ರೇವಸತೇ ಲಕ್ಷ್ಮೀಃ ಕರಮಧ್ಯೇ ಸರಸ್ವತೀ
ಕರಮೂಲೇತು ಶ್ರೀಗೌರೀ ಪ್ರಭಾತೇ ಕರದರ್ಶನಂ॥
ಸಮುದ್ರವಸನೇ ದೇವಿಕ ಪರ್ವತಸ್ತವಮಂಡಲೆ ।
ವಿಷ್ಣುಪತ್ನಿ ನಮಸ್ತುಭ್ಯಂ ಪಾದಸ್ಪರ್ಶಂ ಕ್ಷಮಸ್ವ ಮೇ ॥

ಅಂತಹ ಭೂಮಾತೆಯ ಮೇಲೆ ಭಕ್ತಿ-ಅಭಿಮಾನಗಳನ್ನು ವ್ಯಕ್ತಪಡಿಸುವ ಆಧುನಿಕ ಕವಿಗಳ ಕವನಗಳು ಎಷ್ಟೋ ಇವೆ. ಈ ಲೇಖನದ ಶೀರ್ಷಿಕೆಯ ವ್ಯಾಪ್ತಿ ಕಾವ್ಯಕ್ಕಿರುವುದಾದರೂ ಅಂತಹ ಕವಿತೆಗಳಲ್ಲಿಯೂ ಕೆಲವನ್ನು ಲಕ್ಷಿಸಿ ಉದಾಹರಿಸಲಾಗುವುದು. ಸುಮಾರು ೬೦ ವರ್ಷಗಳ ಹಿಂದೆ, ಶಾಲೆಗಳ ಪಠ್ಯಪುಸ್ತಕಗಳಲ್ಲಿ 'ದೇಶಾಭಿಮಾನ' ಎಂಬ ಶೀರ್ಷಿಕೆಯ ಭಾಮಿನಿ ಷಟ್ಪದಿಯ ಪದ್ಯಭಾಗವಿದ್ದಿತು. ಮಕ್ಕಳಲ್ಲಿ ಎಳವೆಯಲ್ಲೇ ದೇಶಭಕ್ತಿಯನ್ನು ನೆಲೆಗೊಳಿಸುವ ಉದ್ದೇಶದಿಂದ ಶಿಕ್ಷಣವೇತ್ತರು ಅದನ್ನು ತರಗತಿಗೆ ಮಾನ್ಯಮಾಡಿದ್ದರು. ಭಾರತಮಾತೆಯ ಮೇಲಣ ಭಕ್ತಿಯ ಆ ಪದ್ಯಗಳ ಒಂದೆರಡು ಸೊಲ್ಲುಗಳಿವು - (ನನ್ನ ನೆನಪಿನವು)

ಭಾಮಿನಿ ಷಟ್ಪದಿ ॥

ಆವಿನದು ನೊರೆಹಾಲನೊಲ್ಲೆನು
ದೇವಲೋಕದ ಸುಧೆಯನೊಲ್ಲೆನು
ದೇವಿ ನಿನ್ನಯ ನಾಮದದ್ಭುತ ರುಚಿಯನರಿತಿಹೆನು
ಪಾವನಳೆ ನಿನ್ನಂಘ್ರಿಕಮಲದ
ಸೇವೆಯದು ದೊರತಿಹುದು ತಾಯೇ
ಶ್ರೀವರನ ದಯೆಯಿಂದ ಮತ್ತಿನ್ನೇನು ಬೇಡನಗೆ ॥ ೧ ॥

ಬರಲಿ ಬ್ರಾಹ್ಮಣರಲ್ಲಿ ಜನ್ಮವು
ಬರಲಿ ಮಾದಿಗರಲ್ಲಿ ಇಲ್ಲವೆ
ಇರದು ಚಿಂತೆಯು ತಾಯೆ ನಿನ್ನುದರದಲಿ ಜನಿಸುವುದೇ
ಪರಮ ಭಾಗ್ಯವು ಎಂಬುದರಿಯೆನೆ
ಮರೆಯದಯೆ ಪ್ರತಿ ಜನ್ಮದಲಿ ಶ್ರೀ
ಧರನು ದಯೆಯಿಂದೆನಗೆ ನಿನ್ನಲೆ ಕೊಡಲಿ ಜನ್ಮವನು ॥ ೨॥

ನಮ್ಮ ನಾಡಿನಲ್ಲಿ ಶಿಕ್ಷಣ-ಸಾಹಿತ್ಯ ಎಂಬ ಎರಡೂ ಕ್ಷೇತ್ರಗಳಿಗೆ ವಿಶೇಷ ಸೇವೆ ಸಲ್ಲಿಸಿರುವ ಪಂಜೆ ಮಂಗೇಶರಾಯರು (೧೮೭೪-೧೯೩೭) ಕವಿಶಿಷ್ಯನಾಮದಿಂದ ಮಕ್ಕಳ ಪದ್ಯಗಳನ್ನಲ್ಲದೆ ಇತರವನ್ನೂ ರಚಿಸಿದ್ದಾರೆ. ಅವುಗಳಲ್ಲಿ ದೇಶಭಕ್ತಿಯವೂ ಇವೆ. 'ಸತ್ಯಸೀಮೆಗೆ ತಾಯೆ ನಡೆಸಿನ್ನ' ಎಂಬುದು ದೇಶಭಕ್ತಿಪರವಾದುದು. ದೇಶಭಕ್ತಿ ಶೂನ್ಯನೊಬ್ಬನಿಗೆ ಜ್ಞಾನೋದಯವಾಗಿ ಹೇಳುವಂತಿರುವ ಪದ್ಯಗಳಿವು.

ಕೆಲವನ್ನು ಮಾತ್ರ ಉದಾಹರಿಸಲಾಗಿದೆ. ಇವು ಭಾಮಿನಿ ಷಟ್ಪದಿಯಲ್ಲಿವೆ.

ಮಳೆಹನಿಯ ಬಿಡಿಹೂಗಳಲಿ ಮರ
ಗಳ ಹಸುರು ಹಚ್ಚೆಯಲಿ ಕಡಲಿನ
ಬಿಳಿನೊರೆಗಳಂಚಿನಲಿ ಮರುಗುವ ಸೀರೆಯನು ಕಳೆದ
ಹೊಳೆವ ಹೊಳೆಗಳ ಗಳದ ಸರದಲಿ
ಜಗದ ಹಿಮಗಿರಿ ಮಕುಟದಲಿ ಥಳ
ಥಳಿಪ ರಮಣಿಯೆ ಜನ್ಮಧರಣಿಯೆ ಭರತಭೂಮಣಿಯೇ ॥ ೧ ॥

ನನ್ನ ಹಸಿ ಮೈತೊಗಲ ಜೋಡನು
ನಿನ್ನಡಿಗೆ ಜೋಡಿಸುವೆ ಗುಡಿಸುವೆ
ನನ್ನ ಕೂದಲ ಚೌರಿಯಲಿ ನಿನ್ನಡಿಯ ಧೂಳಿಯನು
ನನ್ನ ಮನದಲಿ ಹಿಡಿವೆ ನಿನ್ನನು
ಇನ್ನು ಕುಳ್ಳಿರ್ದೀ ಮನೋರಥ
ವನ್ನು ಬೇಗನೆ ನೂಕಿ ನಡೆವನು ಸುಖದ ಮೇರುವಿಗೆ ॥ ೨ ॥

ಎಲ್ಲಿ ಸಾಹಸ ಸತ್ವದಳತೆಗೆ
ಬಳ್ಳವಾಗದೊ ಮೈಯಬಣ್ಣವು
ಎಲ್ಲಿ ಅನ್ಯಾಯಕ್ಕೆ ಕತ್ತಿಯು ಕೊಡದೊ ಬೆಂಬಲವ
ಎಲ್ಲಿ ಆತ್ಮೋನ್ನತಿಯ ಹಾದಿಗೆ
ಕಲ್ಲು ಮುಳ್ಳನ್ನಿಡರೊ ಆ ಸುಖ
ಸಲ್ಲಲಿತ ಸಮ ಸತ್ಯಸೀಮೆಗೆ ತಾಯೆ ನಡೆಸೆನ್ನ ॥ ೩ ॥

ತುಂಬ ಅರ್ಥಪೂರ್ಣವಾದ ಪದ್ಯಗಳಿವು. ಪಂಜೆಮಂಗೇಶರಾಯರು ತಮ್ಮ ಜೀವಿತದ ಸ್ವಲ್ಪ ಕಾಲ ಕೊಡಗಿನಲ್ಲಿದ್ದರು. ಅಲ್ಲಿಯ ಜನರ ದೇಶಭಕ್ತಿಗೂ ಐತಿಹಾಸಿಕ ಮಹತ್ವಕ್ಕೂ, ಸಂಸ್ಕೃತಿಗೂ ತಲೆದೂಗಿ ದೇಶಾಭಿಮಾನವನ್ನು ಸದಾ ಜಾಗೃತಿಯಲ್ಲಿ ಇರಿಸತಕ್ಕ 'ಹುತ್ತರಿ ಹಾಡು' ಎಂಬ ಕವಿತೆಯನ್ನು ರಚಿಸಿರುತ್ತಾರೆ. ಒಂದೆರಡು ಸೊಲ್ಲುಗಳಿವು –

ಎಲ್ಲಿ ಭೂರಮೆ ದೇವಸನ್ನಿಧಿ ಬಯಸಿ ಬಿಮ್ಮನೆ ಬಂದಳೋ
ಎಲ್ಲಿ ಮೋಹನ ಗಿರಿಯ ಬೆರಗಿನ ರೂಪಿನಿಂದಲಿ ನಿಂದಳೋ
ಎಲ್ಲಿ ಮುಗಿಲಲಿ ಮಿಂಚಿನೋಲ್ ಕಾವೇರಿ ಹೊಳೆ ಹೊಳೆ ಹೊಳೆವಳೋ
ಎಲ್ಲಿ ನೆಲವನು ತಣಿಸಿ ಜನಮನ ಹೊಲದ ಕಳೆ ಕಳೆಕಳೆವಳೋ

ಅಲ್ಲಿ ಆ ಕಡೆ ನೋಡಲಾ
ಅಲ್ಲಿ ಕೊಡವರ ನಾಡಲಾ
ಅಲ್ಲಿ ಕೊಡವರ ಬೀಡಲಾ

ಇದು ಅಗಸ್ತ್ಯನ ತಪದ ಮಣೆ ಕಾವೇರಿ ತಾಯ ತವರ್ಮನೆ
ಕದನಸಿರಿಗುಯ್ಯಾಲೆ ತೂಗಿದನಿಲ್ಲಿ ಚಂದಿರವರ್ಮನೆ
ಇದಕೊ ಚೆಂಗಾಳ್ವರಸರಾಡಂಬರವು ಕುಣಿದ ಶ್ರೀರಂಗವು
ಇದೊ ಇದೋ ಇಲ್ಲುರುಳ್ದ ಹಾಲೇರಿಯರ ಬಲಗಿರಿ ಶೃಂಗವು
ವಿಧಿಯ ಮಾಟದ ಕೊಡಗಿದು
ಮೊದಲೆ ನಮ್ಮದು ಕಡೆಗಿದು
ಕದಲದೆಮ್ಮದು ಬೆಡಗಿದು ॥

ಈ ರೀತಿಯವೇ ಆದ ಇದು ಸೊಲ್ಲುಗಳುಳ್ಳ ದೇಶಭಕ್ತಿಯ ಹಾಡಿದಾಗಿದೆ. ರಾಷ್ಟ್ರಕವಿ ಕುವೆಂಪು ಅವರ ಕಾವ್ಯಕವನಗಳಲ್ಲಿ ದೇಶಭಕ್ತಿ ಪರವಾದವು ಅನೇಕವಾಗಿವೆ. ಅವುಗಳಲ್ಲಿ ಕೂಡ 'ಭಾರತ ಜನನಿಯ ತನುಜಾತೇ ಜಯಹೇ ಕರ್ನಾಟಕ ಮಾತೇ' ಎಂಬುದಂತೂ ನಾಡಗೀತೆಯಾಗಿ ಮಾನ್ಯವಾಗಿರುತ್ತವೆ. ಭಾರತ ಮಾತೆ ಮತ್ತು ಕರ್ನಾಟಕ ಮಾತೆಯರಿಬ್ಬರ ಮೇಲೆಯೂ ಭಕ್ತಿಗೌರವಗಳನ್ನು ಉದ್ಯೋತಿಸುವಂಥದಾಗಿದೆ.

ಮಂಜೇಶ್ವರ ಗೋವಿಂದ ಪೈಯವರ ಕವನ – 'ತಾಯೆ ಬಾರ ಮೊಗವ ತೋರ ಕನ್ನಡಿಗರ ಮಾತೆಯೇ' ಎಂಬುದು ಬಹಳ ಮಹತ್ವವುಳ್ಳ ದೇಶಭಕ್ತಿ ಗೀತವಾಗಿರುತ್ತದೆ. ಇನ್ನಿತರ ಆಧುನಿಕ ಕವಿವರರಾದ ದ.ರಾ. ಬೇಂದ್ರೆ, ಪು.ತಿ.ನ, ಅಡಿಗ, ನರಸಿಂಹಸ್ವಾಮಿ ಮುಂತಾದವರ ರಚನೆಗಳಲ್ಲಿ ದೇಶಭಕ್ತಿ ತುಳುಕುವಂಥವು ಎಷ್ಟೋ ಇವೆ. ಡಿ.ಎಲ್. ನರಸಿಂಹಚಾರ್ ಅವರ ಮುನ್ನುಡಿಯೊಂದಿಗೆ ೧೯೬೧ರಲ್ಲಿ ಹೊರಬಂದ ನನ್ನ 'ತೂಗುದೀವಿಗೆ' ಎಂಬ ಕವನ ಸಂಕಲನದಲ್ಲಿ 'ರಾಷ್ಟ್ರಾಭಿಮಾನ' ಎಂಬುದು ಕಂದ ವೃತ್ತಗಳಲ್ಲಿ ರಚಿತವಾಗಿರುವ ರಾಷ್ಟ್ರಭಕ್ತಿ ಕವಿತೆಯಾಗಿರುತ್ತದೆ.

ಲೌಕಿಕದಲ್ಲಿ ಇಂತಹ ದೇಶಭಕ್ತಿ ಪರವಾದ ಕವನಗಳು ಇತರ ಭಕ್ತಿಕವನಗಳಿಗಿಂತ ಮೇಲು. ಮಾತೃ–ಪಿತೃ–ಗುರು–ದೇವ ಭಕ್ತಿಗಳಿಗೆ ಬೀಜ ರೂಪವಾದುದು ಎನ್ನಬಹುದು. ಅದು ಅಭ್ಯುದಯಕಾರಕವಾಗಿ ನಿಃಶ್ರೇಯಸದ ಸಾಧನೆಗೆ ಮಾರ್ಗವಾದುದೆನ್ನಲು ಅಡ್ಡಿಯಿಲ್ಲ. ಅಂತಹ ದೇಶಭಕ್ತಿ ದೇಶದ ಪ್ರಜೆಗಳಲ್ಲೆಲ್ಲಾ ಇರಬೇಕಾದುದು. ಅಂತಹ ದೇಶಭಕ್ತಿ, ಕವಿತೆಗಳಲ್ಲಿ ಮಾತ್ರ ಇದ್ದರೆ ಸಾಲದು. ಎಲ್ಲರ ರಕ್ತಗತವಾಗಿ ಅವರವರ ನಡೆವಳಿಗಳಲ್ಲಿ ಕಾಣಿಸಬೇಕು. ಹಾಗಾದಾಗ ಪ್ರತಿಯೊಬ್ಬನೂ ಯಾವುದೇ ಕಾರ್ಯವನ್ನು ಕೈಗೊಳ್ಳುವಾಗ ಇದು ದೇಶದ್ರೋಹವಾಗಬಹುದೆ? ಭೂಮಾತೆಗೆ ತನ್ನ ಈ ಕೃತ್ಯವು ಮೆಚ್ಚುಗೆಯದಾಗಬಹುದೆ? ಎಂಬ ಮುಂದಾಲೋಚನೆಯುಂಟಾಗಬಹುದು. ಸ್ವತಃ ಫಲಾಪೇಕ್ಷೆಯಿಟ್ಟುಕೊಳ್ಳದೆ ಲೋಕಹಿತಕ್ಕಾಗಿ, ನಾಡತಾಯ ಪ್ರೀತಿಗಾಗಿ ತನ್ನಿಂದಾಗುವ ಸೇವೆ ಸಲ್ಲಿಸಲು ಅನುಕೂಲವಾಗುವುದು. ಅದೇ ವ್ಯಕ್ತಿಯ ಸ್ವಾರ್ಥವೆಂದಿಟ್ಟುಕೊಳ್ಳಬಹುದು. ಇದರಿಂದ ರಾಷ್ಟ್ರದಲ್ಲಿ ಶಾಂತಿ ಸಮೃದ್ಧಿಗಳಾಗುವವು. ಜಾತಿಗತ, ಸ್ಥಾನಗತ ಭೇದ ವೈಮನಸ್ಯಗಳು ಸಮೂಲವಾಗಿ ಇಲ್ಲದಾಗುವವು. ಸರ್ವ ಸಮಾನತೆ ನೆಲಸುವುದು.

❒

# ೫. 'ಇಳೆ ನಿಮ್ಮ ದಾನ' ವಚನ ವಿಶ್ಲೇಷಣೆ

■ ಪ್ರೊ.ಜಿ. ಅಬ್ದುಲ್ ಬಷೀರ್

ವಚನ ಸಾಹಿತ್ಯ ಚಳುವಳಿ ರೂಪದ್ದು. ಆತ್ಮೋದ್ಧಾರ ಹಾಗೂ ಸಮಾಜೋದ್ಧಾರವೇ ಅದರ ಉದ್ದೇಶ. ರಾಜಸತ್ತೆ ಮತ್ತು ಪುರೋಹಿತ ಶಾಹಿಗಳ ಬಗ್ಗೆ ಪ್ರತಿಭಟನೆ ನಡೆದದ್ದು ೧೨ನೆಯ ಶತಮಾನದಲ್ಲಿಯೆ, ಅದೂ ಕರ್ನಾಟಕದಲ್ಲಿ. ವಚನಸಾಹಿತ್ಯ ಸಾಹಿತ್ಯಕ, ರಾಜಕೀಯ, ಸಾಮಾಜಿಕ, ಧಾರ್ಮಿಕ ಹಾಗೂ ಆರ್ಥಿಕ ಕ್ರಾಂತಿಯ ಫಲವಾಗಿದೆ. ವಚನಗಳು ಮೊದಲು ಶಾಸ್ತ್ರ, ಆಮೇಲೆ ಸಾಹಿತ್ಯ. ಕವಿಹೃದಯದ ಶಿವಶರಣರು ರಚಿಸಿದ್ದು ಮೇಲಾದ ಸಾಹಿತ್ಯವಾಯಿತು. ಮಾರ್ಗಸಾಹಿತ್ಯ ದೇಸೀನಿಷ್ಠವೂ ಜನಸಮ್ಮುಖವೂ ಆದದ್ದು ವಚನಸಾಹಿತ್ಯದ ಕಾಲದಲ್ಲಿಯೇ! ಈ ಕಾಲದಲ್ಲಿ ಕಾಣಿಸಿಕೊಳ್ಳುವ ಜೇಡರದಾಸಿಮಯ್ಯ (ಕ್ರಿ.ಶ. ಸುಮಾರು ೧೦೩೦) ಒಬ್ಬ ಮುಖ್ಯ ವಚನಕಾರ.

ಜೇಡರದಾಸಿಮಯ್ಯ ಬಸವಣ್ಣನವರಿಗಿಂತ ಸ್ವಲ್ಪ ಹಿಂದೆ ಇದ್ದಂತಹ ವಚನಕಾರ. ನೇಯ್ಗೆವೃತಿಯನ್ನವಲಂಬಿಸಿದ ಈತ ಗುಲ್ಬರ್ಗ ಜಿಲ್ಲೆಯ ಮುದನೂರಿನವನು. ಇವನ ಪತ್ನಿ ದುಗ್ಗಳೆ. ಇವನು ಮುದನೂರಿನ 'ರಾಮನಾಥನ'ಭಕ್ತ. ಇವನ ವಚನಗಳ ಅಂಕಿನ 'ರಾಮನಾಥ'. ಈತ 'ಆದ್ಯವಚನಕಾರ' ಎಂಬ ಖ್ಯಾತಿಯನ್ನು ಪಡೆದಿದ್ದಾನೆ. ಆತ ತನ್ನ ವಚನಗಳಲ್ಲಿ ಬಳಸಿರುವ 'ಶರಣರ ಸೂಳ್ನುಡಿ', 'ಮೃಡಶರಣರ ನುಡಿಗಡಣ' ಎಂಬ ಮಾತುಗಳೇ ಅದಕ್ಕೆ ಸಾಕ್ಷಿ. ಈ ಮಾತುಗಳು ವಚನಸಾಹಿತ್ಯದ ಪ್ರಾಚೀನತೆಯ ದರ್ಶನವನ್ನು ಮಾಡಿಸುತ್ತವಲ್ಲದೆ

ವಚನಸಾಹಿತ್ಯ ಆಧ್ಯಾತ್ಮಕ ಹಾಗೂ ಚಿಂತನಪರ ಪರಂಪರೆಯಾಗಿ ಕರ್ನಾಟಕದಲ್ಲಿ ನೆಲೆಯೂರುತ್ತಿತ್ತು ಎಂಬುದರತ್ತ ಬೆಟ್ಟುಮಾಡಿ ತೋರಿಸುತ್ತದೆ.

ಈತನ ವಚನಗಳು ಸಾಹಿತ್ಯಕಗುಣಗಳಿಂದ ಕೂಡಿವೆ. ಸಂಕ್ಷಿಪ್ತತೆ, ಸರಳತೆ, ಅರ್ಥಪ್ರಚುರತೆ ಅವನ ವಚನಗಳ ಮುಖ್ಯಗುಣ. ಅವನ ಕಾಲದ ಸಾಮಾಜಿಕ ಜೀವನದ ವಿಡಂಬನೆ, ಟೀಕೆಗಳನ್ನು ಅವನ ವಚಗಳಲ್ಲಿ ಕಾಣಬಹುದು. ಜೇಡರದಾಸಿಮಯ್ಯನ ಲಭ್ಯ ವಚನಗಳು– ೧೭೬.

ಮಾನವ ಲೋಕದ ಜನ ತ್ಯಾಗಮನೋಭಾವದಿಂದಲೋ, ಕೀರ್ತಿಗಾಗಿಯೋ, ವೈಯಕ್ತಿಕ ಪ್ರಯೋಜನಕ್ಕಾಗಿಯೋ, ಹಣಕ್ಕಾಗಿಯೋ, ಪ್ರತಿಷ್ಠೆಗಾಗಿಯೋ ರಕ್ತದಾನ, ನೇತ್ರದಾನ, ಶ್ರಮದಾನ, ವಿದ್ಯಾದಾನ, ರಾಜ್ಯದಾನ, ಗ್ರಂಥದಾನ, ದೇಹದಾನ, ಕ್ಷಮಾದಾನ, ಕನ್ಯಾದಾನ, ಗೋದಾನ, ಭೂದಾನ, ಅನ್ನದಾನ, ವಸ್ತ್ರದಾನ, ಧನದಾನ, ಮೂತ್ರಪಿಂಡದಾನದಂಥ ದಾನಗಳನ್ನು ಮಾಡುತ್ತಾರೆ. ಈ ಮಾನವದಾನಗಳು ಕ್ಷಣಿಕ ಸುಖವನ್ನೋ, ತೃಪ್ತಿಯನ್ನೋ, ಯಶಸ್ಸನ್ನೋ, ಕ್ಷಣಕಾಲದ ಜೀವನವನ್ನೋ ನೀಡುವಂಥವು. ಆದರೆ 'ದೈವದಾನ'ಗಳು ಶಾಶ್ವತವಾದಂಥವು; ಸಕಲ ಜೀವ ಜಗತ್ತಿಗೇ ತೃಪ್ತಿನೀಡುವಂಥವು; ಜೀವ ನೀಡುವಂಥವು. 'ಇಳೆ', 'ಬೆಳೆ', 'ಗಾಳಿ' ಇಲ್ಲದೆ ಜೀವಸಂಕುಲಕ್ಕೆ ಅಸ್ತಿತ್ವವೇ ಇಲ್ಲ. ಹೀಗಾಗಿ 'ಶಿವದಾನ ದಿವ್ಯ'ವಾದದ್ದು. ಮನುಷ್ಯ ಒಬ್ಬರಿಂದ 'ಪಡೆದು', 'ಮತ್ತೊಬ್ಬರನ್ನು ಹೊಗಳುವುದು' ಆತನ ಆಸೆಬುರುಕುತನವನ್ನೂ ದೌರ್ಬಲ್ಯವನ್ನೂ ತೋರಿಸುತ್ತದೆ. ಇಂಥ ಅನೈತಿಕ ಪ್ರವೃತ್ತಿಯನ್ನು ಜೇಡರದಾಸಿಮಯ್ಯ ಖಂಡಿಸುತ್ತಾನೆ. ಇಂಥ ಕ್ರಾಂತಿಕಾರಿ ಮನೋಧರ್ಮದ ವಚನಗಳನ್ನು ಆತ ರಚಿಸಿದ್ದಾನೆ. ಆತನ ತಾತ್ತ್ವಿಕ, ಆಧ್ಯಾತ್ಮಿಕ ಚಿಂತನೆ, ಸಾಮಾಜಿಕ ವಿಡಂಬನೆ, ದೈವಸ್ತುತಿ, ಟೀಕೆ, ಕೃತಜ್ಞತಾ ಮನೋಭಾವ, ಕೃತಘ್ನಬುದ್ಧಿ, ಸಾಹಿತ್ಯಕ ಗುಣಗಳನ್ನು ಈ ವಚನದಲ್ಲಿ ನೋಡಹಬುದು :

"ಇಳೆ ನಿಮ್ಮ ದಾನ, ಬೆಳೆ ನಿಮ್ಮ ದಾನ,
ಸುಳಿದು ಬೀಸುವ ವಾಯು ನಿಮ್ಮದಾನ,
ನಿಮ್ಮ ದಾನವನುಂಡು ಅನ್ಯರ ಹೊಗಳುವ
ಕುನ್ನಿಗಳನೇನೆಂಬೆ ರಾಮನಾಥ"[೧]

ಈ ವಚನದ ಅರ್ಥ ಇಷ್ಟು :

"ಈ ಭೂಮಂಡಲವನ್ನು ನೀವು ದಯಪಾಲಿಸಿದ್ದು. ಈ ಭೂಮಂಡಲದ ಮೇಲಿನ ಬೆಳೆಗಳನ್ನು ನೀವು ದಯಪಾಲಿಸಿದ್ದು. ಭೂಮಂಡಲದ ಮೇಲೆ ಸೂಸುವ ಗಾಳಿಯನ್ನು ನೀವು ದಯಪಾಲಿಸಿದ್ದು. ನೀವು ದಯಪಾಲಿಸಿದ ಇಂಥ 'ಮಹಾದಾನಗಳನ್ನು ತಿಂದು ಬೇರೆಯವರನ್ನು ಸಾಮಾನ್ಯ ಜನಗಳನ್ನು ಹೊಗಳುವ ಸಣ್ಣಮಕ್ಕಳಂತಹ ಜನರನ್ನು (ಸಣ್ಣವರನ್ನು, ನಾಯಿ–ಮರಿಗಳನ್ನು) ಏನೆನ್ನಲಿ ಶಿವ"!.

ನಾಲ್ಕು ಸಾಲಿನ ಈ ಸಂಕ್ಷಿಪ್ತ ವಚನಸೃಷ್ಟಿಗೆ ಜೇಡರದಾಸಿಮಯ್ಯನ 'ದಿವ್ಯದೃಷ್ಟಿಯೇ' ಕಾರಣ. 'ಯಾರು ಶಿವ?' 'ಸಂಪದ್ಭರಿತ ಸುಂದರ ಜಗತ್ತನ್ನು ಸೃಷ್ಟಿಸಿದವನೂ, ಈ ಜಗತ್ತಿರುವ ವರೆಗೆ ಶಾಶ್ವತವಾಗಿ ಇರುವವನೂ ಆದಂಥವನು; ಸಮಸ್ತವಸ್ತುಗಳಲ್ಲಿ ಹುದುಗಿರುವಂಥವನು'. 'ಯಾರು ಮಾನವ?' 'ಸಂಪದ್ಭರಿತವೂ ಸುಂದರವೂ ಆದ ಜಗತ್ತನ್ನು ಅನುಭವಿಸುವವನೂ ಅಶಾಶ್ವತನೂ ಕೃತಜ್ಞತಾಮನೋಧರ್ಮರಹಿತನೂ ಆದವನು'.

ವಚನದ ಮೊದಲನೆಯ ಸಾಲು **'ಇಳೆ ನಿಮ್ಮ ದಾನ'**:

ಭೂಮಿ ಶಿವನ ಕೊಡುಗೆ; ಅದು ಶಿವ ಸೃಷ್ಟಿ; ಅಂದರೆ ಭೂಮಿಯ ಮೇಲಿರುವ ಮಾನವ ಬದುಕಿಗೆ ಅಗತ್ಯವಾಗಿರುವ ಸಚರಾಚರ ವಸ್ತುಗಳೂ ಶಿವನ ಕೊಡುವಿಕೆ. ಪಶುಪಕ್ಷಿಪ್ರಾಣಿಗಳನ್ನೂ ಮರ-ಗಿಡಬಳ್ಳಿಗಳನ್ನೂ ಅದು ಒಳಗೊಳ್ಳುತ್ತದೆ. ಪಶುಪಕ್ಷಿ ಪ್ರಾಣಿಗಳು ಅಗತ್ಯವಿರುವ ಮಾನವನಿಗೆ ಮಾಂಸವನ್ನೂ ಬಗೆಬಗೆಯ ವಸ್ತುಗಳನ್ನೂ ಸೂರ್ಯಚಂದ್ರ ನಕ್ಷತ್ರಾದಿಗಳು ಲೋಕಕ್ಕೆ ಬೆಳಕನ್ನೂ ನೀಡುತ್ತವೆ. ಇವಿಲ್ಲದೆ ಮನುಷ್ಯ, ಭೂಮಿಯ ಮೇಲೆ ಜೀವಿಸಲು ಸಾಧ್ಯವಿಲ್ಲ. ಭೂಮಿ, ಮಾನವನಿಗೆ ವಸತಿ, ಅನ್ನ, ಬಟ್ಟೆಗಳನ್ನೂ; ಓಡಾಡಲು, ಬದುಕಲು, ಸಾಯಲು ಸ್ಥಳವನ್ನೂ ನೀಡುತ್ತದೆ. ಇಂಥ ಮಹಾದಾನಗಳನ್ನು 'ಭವಿ'ಯಾದವನು ಕೊಡಲು ಸಾಧ್ಯವಿಲ್ಲ; 'ಅಭವ' ಮಾತ್ರ ಕೊಡಲು ಸಾಧ್ಯ. ಈ ವಸ್ತುಗಳ ಸಂಸರ್ಗವಿಲ್ಲದೆ ಮಾನವ ಬದುಕಲು ಹೇಗೆ ತಾನೇ ಸಾಧ್ಯ?

ವಚನದ ಎರಡನೆಯ ಸಾಲು **'ಬೆಳೆ ನಿಮ್ಮ ದಾನ'**:

ಭೂಮಿಯ ಮೇಲಿರುವ ಬೆಳೆಗಳೂ ಶಿವನ ಕೊಡುಗೆ. ಶಿವಸೃಷ್ಟಿಯ ಬೆಳೆ ಸಸ್ಯಾದಿಗಳಿಗೂ ಶಿವನೇ ನೀರುಣಿಸಿ ಬೆಳೆಸಬೇಕು. ಮಾನವ ಬೆಳೆಯುವ ಬೆಳೆಗಳಿಗೂ ಶಿವನೇ ನೀರುಣಿಸಿ ಬೆಳೆಸಬೇಕು. 'ಕೆರೆಕಟ್ಟೆಕುಂಟೆಬಾವಿ ಬೋರ್‌ವೆಲ್‌ನದಿಗಳ' ನೀರಿನಿಂದ ನಾವು ಬೆಳೆಯುವ ಬೆಳೆಗಳೂ ಅವನ ವರವೇ! ಅಂತರ್‌ಜಲವೂ ಭೂಮಿಯ ತಳಭಾಗದಿಂದ ಅದನ್ನೆತ್ತಲು ಬಳಸುವ ಸಕಲಸಾಮಗ್ರಿಗಳೂ ಅವನ ವರವೇ! ಮಾನವ, ಪಶುಪಕ್ಷಿ ಪ್ರಾಣಿ ಜೀವ ಜಂತುಗಳಿಗೆ ಆಹಾರವನ್ನು ಒದಗಿಸುವ ಬೆಳೆಗಳ ಸೃಷ್ಟಿಗೂ ಅವುಗಳ ಲಾಲನೆ ಪಾಲನೆಗೂ ಅವನೇ ಕಾರಣಕರ್ತ.[೨]

ಬೆಳೆಗಳು ಎಂದರೆ ಮರಗಿಡಬಳ್ಳಿಗಳು, ದವಸಧಾನ್ಯಗಳು. ಇವು ಉರಿಸಲು ಸೌದೆಗಳನ್ನೂ, ಕಟ್ಟಡಗಳ ನಿರ್ಮಾಣಕ್ಕೆ ಬೇಕಾದ ಸಾಮಗ್ರಿಗಳನ್ನೂ, ಹಣ್ಣು-ಹೂಗಳನ್ನೂ, ಎಲೆಗಳನ್ನೂ, ಸುವಾಸನೆಯನ್ನೂ ಉದಾರವಾಗಿ ನೀಡುತ್ತವೆ. ದವಸಧಾನ್ಯಗಳು ಆಹಾರವನ್ನು ನೀಡುತ್ತವೆ. 'ಕಬ್ಬುರಸವನ್ನೂ ಬಗೆಬಗೆಯ ಬಳ್ಳಿಗಿಡ-ಮೂಲಿಕೆಗಳು ಬಗೆಬಗೆಯ ಔಷಧಗಳನ್ನೂ ನೀಡುತ್ತವೆ. 'ಮಾಂಸಾಹಾರ ಮತ್ತು ಸಸ್ಯಾಹಾರದ' ಸಮತೋಲನ ಆಹಾರ ಸೇವನೆಗೂ ಅದರ ಬೆಳೆಯುವಿಕೆಗೂ ಭೂಮಿಯೇ ಕಾರಣ. ಇದೇ ಸೃಷ್ಟಿ ನಿಯಮ. ಎಲ್ಲರೂ ಮಾಂಸಾಹಾರಿಗಳಾಗಿದ್ದರೆ ಇಲ್ಲವೆ ಎಲ್ಲರೂ ಸಸ್ಯಾಹಾರಿಗಳಾಗಿದ್ದರೆ ಈ ಜಗತ್ತನ್ನು ನಾವು ಕಲ್ಪಿಸಿಕೊಳ್ಳಲೂ ಸಾಧ್ಯವಾಗುತ್ತಿರಲಿಲ್ಲ. ಮನುಷ್ಯನಂತೆ ಇವಾವುವೂ ಜಿಪುಣತನವನ್ನು ಪ್ರದರ್ಶಿಸುವುದಿಲ್ಲ.

ವಚನದ ಮೂರನೆಯ ಸಾಲು **'ಸುಳಿದು ಬೀಸುವ ವಾಯು ನಿಮ್ಮ ದಾನ'**:[೩]

ಭೂಮಿಯ ಮೇಲೆ ಬೀಸುವ ಗಾಳಿಯನ್ನು ಶಿವದಯಪಾಲಿಸಿದ್ದು. ಅದು ಮಾನವನಿಗೆ ಪ್ರಾಣವಾಯುವಾಗಿ ಸಂಚರಿಸಿ ಸಹಕರಿಸುತ್ತದೆ. ಇಂಥ ವಾಯುವನ್ನು ಯಾವ ಮಾನವ ಮಾತ್ರದವನಾದ ವೈದ್ಯನೂ ನೀಡಲಾರ ಎಂಬುದೇ ಇಲ್ಲಿರುವ ಸ್ವಾರಸ್ಯ! ವಾಯುವಿಲ್ಲದೆ ಮಾನವನಿಗೆ ಬದುಕೂ ಇಲ್ಲ; ಅಸ್ತಿತ್ವವೂ ಇಲ್ಲ.

'ಇಳೆ', 'ಬೆಳೆ', 'ವಾಯು'ಗಳು ಶಿವಸೃಷ್ಟಿ. ಇವುಗಳ ಮೂಲಕ ಶಿವ ಮನುಷ್ಯನನ್ನು ಕಾಪಾಡುತ್ತಾನೆ. ಇಂಥಮಂಗಳಪ್ರದ ಶಿವನ ಗುಣಗಾನ ಮಾಡದೆ ಸಾಮಾನ್ಯ ಮನುಷ್ಯನನ್ನು ಹೊಗಳುವುದು ತರವಲ್ಲ.

ಮೂರು ಸಾಲುಗಳಲ್ಲಿ ಮತ್ತೆಮತ್ತೆ (ನಾಲ್ಕು ಬಾರಿ) ಪುನರಾವರ್ತನೆಯಾಗುವ 'ನಿಮ್ಮ ದಾನ' ಎಂಬ ಶಬ್ದ 'ಎಲ್ಲಾ ನಿಮ್ಮದೇ, ನಮ್ಮದೇನೂ ಇಲ್ಲ' ಎಂಬುದನ್ನು ಸೂಚಿಸುತ್ತದೆ. ಸೃಷ್ಟಿಕರ್ತನ ಮಹತ್ವವನ್ನೂ ಮನುಷ್ಯನ ಅಲ್ಪತ್ವವನ್ನೂ ಈ ಮಾತುಗಳು ಧ್ವನಿಸುತ್ತವೆ.

ವಚನದ ನಾಲ್ಕನೆಯ ಸಾಲು – ನಿಮ್ಮ' **ದಾನವನುಂಡು ಅನ್ಯರ ಹೊಗಳುವ ಕುನ್ನಿಗಳನೇನೆಂಬೆ ರಾಮನಾಥ'**:

ಮನುಷ್ಯ ಮೂಲಭೂತ ಸೌಕರ್ಯಗಳನ್ನೆಲ್ಲ ಶಿವನಿಂದ ಪಡೆದು ಭೂ ಅರಸರನ್ನೂ, ಭೂಮಾಲೀಕರನ್ನೂ ಶ್ರೀಮಂತರನ್ನೂ ಹೊಗಳುವ ಸಣ್ಣವರನ್ನು (ನಾಯಿಮರಿಗಳನ್ನು) 'ಏನೆನ್ನಲಿ', 'ನೀವೇ ಹೇಳಿ' ಎಂದು ಶಿವನನ್ನೇ ಪ್ರತ್ಯಕ್ಷವಾಗಿರಿಸಿಕೊಂಡು, ಜೇಡರ ದಾಸಿಮಯ್ಯ ಪ್ರಶ್ನಿಸಿದ್ದಾನೆ. ಈ ಸಾಲು ವಿಸ್ಮಯವನ್ನೂ, ಪ್ರಶ್ನೆಯನ್ನೂ, ಅಸಹ್ಯವನ್ನೂ, ಬೇಸರವನ್ನೂ, ಅಸಮಾಧಾನವನ್ನೂ, ತಿರಸ್ಕಾರವನ್ನೂ ಧ್ವನಿಸುತ್ತದೆ. 'ಇಲ್ಲಿನ ಅನ್ಯರ' ಎಂಬ ಶಬ್ದ ಬಳಕೆ ಬೇರೆ ವ್ಯಕ್ತಿಗಳನ್ನೂ, ಬೇರೆ ದೈವವನ್ನೂ ಸೂಚಿಸುತ್ತದೆ. ಶಿವ ನೀಡಿದ ದಾನಗಳನ್ನುಂಡು ತೇಗಿ ಮಾನವ ಮಾತ್ರರನ್ನೂ ಬೇರೆ ದೈವಗಳನ್ನೂ ಹೊಗಳುವ ಶಿವಭಕ್ತರು ಚಂಚಲಚಿತ್ತರು; ಸ್ವಾರ್ಥಿಗಳು; ಪಕ್ಷಪಾತಮನೋಧರ್ಮದವರು; ದಿವ್ಯದೃಷ್ಟಿಯ ಅಭಾವವುಳ್ಳವರು. 'ಏಕದೈವ' ನಂಬಿಕೆಗೆ ಅನರ್ಹರಾದವರು. 'ಅಭವ ನೀಡುವ ದಾನಗಳನ್ನುಂಡು 'ಭವಿಗಳನ್ನು' ಸ್ತುತಿಸುವವರು 'ನಾಯಿ'' ಸ್ವಭಾದವರು; ಬಾಲಿಶರು. ನಾಯಿ ಸ್ವಭಾವ ಎಂಥದ್ದು? 'ಚಂಚಲ'. ಒಡೆಯನ ಮನೆಯನ್ನು ಕಾಯುತ್ತಾ ಸ್ವಾಮಿಭಕ್ತಿಯನ್ನು ಪ್ರದರ್ಶಿಸುತ್ತಾ ಅವನು ಹಾಕಿದ ಅನ್ನವನ್ನು ಉಣ್ಣುತ್ತದೆ. ಪರವ್ಯಕ್ತಿಗಳು ಅನ್ನದ ಆಸೆಯನ್ನು ತೋರಿಸಿದರೆ ಅದೇ ನಾಯಿ ಅಲ್ಲಿಯೂ ಹೋಗಿ ಉಂಡುಬರುತ್ತದೆ. 'ಯಾರು ತನ್ನ ಸ್ವಾಮಿ', ಯಾರು ಅನ್ಯ ಮಾನವರು ಎಂಬ ವಿವೇಕ ಅದಕ್ಕಿರುವುದಿಲ್ಲ. 'ತಿನ್ನುವುದಷ್ಟೇ' ಅದಕ್ಕೆ ಗೊತ್ತು! 'ಕುನ್ನಿ' ಎಂಬ ಶಬ್ದದಲ್ಲಿ ತಿರಸ್ಕಾರದ ಭಾವವಿದೆ. 'ಕುನ್ನಿ' ಎಂದರೆ 'ನಾಯಿಮರಿ', 'ಸಣ್ಣಮಗು'. ಅದು ಅವಿವೇಕದ ಪರಮಾವಧಿಯ ಸಂಕೇತ.

ಈ ವಚನದಲ್ಲಿ ಬರುವ 'ಕುನ್ನಿ' ಎಂಬ ಶಬ್ದ 'ಬುದ್ಧಿ ಹೀನತೆ'ಯನ್ನೂ, ಅಜ್ಞಾನವನ್ನೂ ಸೂಚಿಸುತ್ತದೆ. ಚಂಚಲಚಿತ್ತರಾದ ಮಾನವರಿಗೆ (ಕೆಲವು ಶಿವಭಕ್ತರಿಗೆ) ಯಾರು ತಮ್ಮ ದೇವರು, ಯಾರಲ್ಲ?' ಎಂಬ ಸಾಮಾನ್ಯ ಪ್ರಜ್ಞೆ' ಇರುವುದಿಲ್ಲ. ದೇವರ ದಾನವನ್ನುಂಡು ಯಕಶ್ಚಿತ್ ಮಾನವರನ್ನು ಸ್ವಾರ್ಥಕ್ಕಾಗಿ ಸ್ತುತಿಸುವುದು ತರವಲ್ಲ! ಶಿವಭಕ್ತರು ಲೌಕಿಕ ಆಸೆ ಆಕಾಂಕ್ಷೆಗಳ ಸಲುವಾಗಿ ಭವಿಗಳಾದ 'ರಾಜಾಧಿರಾಜರನ್ನೂ', 'ಮಾನವರನ್ನೂ' ಹೊಗಳುತ್ತಿದ್ದರು.[5] ಮನುಷ್ಯ ಸಣ್ಣಪುಟ್ಟ ದಾನ ಮಾಡುತ್ತಾನೆ. ದರೆ ಶಿವಸೃಷ್ಟಿ ಸಮಸ್ತ ಜೀವ ಕುಲಕೋಟಿಗೆ ಶಾಶ್ವತವಾದ 'ಜೀವದಾನವನ್ನು' ಮಾಡುತ್ತದೆ. ಮನುಷ್ಯದಾನಗಳೇನೆಂದರೂ ಕ್ಷಣಿಕವೇ, ಅಲ್ಪತೃಪ್ತಿಯವೇ!

'ತಾನು ಇತರರಿಗಾಗಿ' ಎಂಬ ಅಹಂಕಾರ ಪ್ರದರ್ಶನ ಮಾನವರಲ್ಲಿ ಎದ್ದು ಕಾಣುತ್ತದೆ. ಶಿವಸೃಷ್ಟಿಯ ತತ್ತ್ವದೊಳಗಡೆ ಇಂಥ ಅಹಂ ಪ್ರದರ್ಶನ ಕಂಡುಬರುವುದಿಲ್ಲ; ಎಲ್ಲವೂ ಮಾನವರಿಗಾಗಿ, ಶಿವಭಕ್ತರಿಗಾಗಿ. ಈ ಮೇಲಿನ ಕಾರಣಗಳಿಂದ ಶಿವಶರಣರು ಶಿವನಿಗೆ ಚಿರಋಣಿಗಳಾಗಿರಬೇಕು; ಕೃತಜ್ಞರಾಗಿರಬೇಕು; ಕೃತಘ್ನರಾಗಿರಬಾರದು.

"ಜಗತ್ತೆಲ್ಲವೂ ಪರಮಾತ್ಮನಿಂದ ಆವೃತ್ತವಾಗಿದೆ. ತ್ಯಾಗಮಾಡಿಯೇ ಅನುಭವಿಸಬೇಕು; ಲೋಭಪಡಬಾರದು; ಹಣ ಪರಮಾತ್ಮನದು" ಎಂಬ ಈಶೋಪನಿಷತ್ತಿನ ಮಾತು ಸ್ಮರಣಾರ್ಹವಾದುದು. ಈ ಬಗೆಯ ಆಧ್ಯಾತ್ಮಿಕ ಚಿಂತನೆ, ಜೇಡರದಾಸಿಮಯ್ಯನ ಅನೇಕ ವಚನಗಳಲ್ಲಿ ದಟ್ಟವಾಗಿ ಗೋಚರಿಸುತ್ತದೆ. ಶಿವ, ಮಾನವರಿಗೆ ಬಗೆಬಗೆಯ ದಾನಗಳನ್ನು ನೀಡಿದ್ದಾನೆ. ಆದರೆ ಶಿವ, ಅದಕ್ಕೆ ಪ್ರತಿಯಾಗಿ ಏನನ್ನೂ ಬಯಸುವುದಿಲ್ಲ. ಅದು ಹೇಗೆಂದರೆ; ಸಮುದ್ರದ ನೀರು ಸೂರ್ಯನ ಶಾಖಕ್ಕೆ ಆವಿಯಾಗಿ ಮೋಡವಾಗುತ್ತದೆ; ಮೋಡ ನೀರನ್ನು ಸುರಿಸುತ್ತದೆ. ಆ ನೀರು ಗಿಡಮರಬಳ್ಳಿ ಪಶು-ಪಕ್ಷಿ ,ಪ್ರಾಣಿ-ಮಾನವರಿಗೆ ಜೀವಧಾತುವಾಗುತ್ತದೆ. ಉಳಿದ ನೀರು ಮತ್ತೆ ಸಮುದ್ರವನ್ನು ಸೇರುತ್ತದೆ; ಪ್ರತಿಯಾಗಿ ಏನನ್ನೂ ಬಯಸದ ದಾನಕ್ಕೆ ಇದು ಒಂದು ಒಳ್ಳೆಯ ನಿದರ್ಶನವಾಗಿದೆ. ಇದು 'ಕೊಡುಗೈ ದೊರೆ' ಶಿವನ ದಾನಕ್ಕೆ ಒಂದು ಪುಟ್ಟ ಉದಾಹರಣೆಯಷ್ಟೆ!.

ಜಗತ್ತು ಶಿವಸೃಷ್ಟಿ; ಅಂದಮೇಲೆ ಜಗತ್ತೆಲ್ಲಾ ಶಿವಮಯ. ಜಗತ್ತಿನ ಚಲನಶೀಲತೆಗೆ ಆತನ ಆಣತಿಮುಖ್ಯ ಎಂಬುದು ಇಲ್ಲಿ ಗಮನಿಸಬೇಕಾದ ವಿಚಾರವಾಗಿದೆ.

ವಚನದ ಮೊದಲ ಎರಡು ಸಾಲುಗಳು ನಿರ್ಣಯಾತ್ಮಕವಾಗಿವೆ. ಅಲ್ಲಿ ಸಂದೇಹಕ್ಕಾಗಲೀ, ಅಸ್ಪಷ್ಟತೆಗಾಗಲೀ, ಸಂದಿಗ್ಧತೆಗಾಗಲೀ ಎಡೆಯಿಲ್ಲ. ಏಕೆಂದರೆ ಆ ಮಾತುಗಳು ಸೃಷ್ಟಿಕರ್ತನಿಗೆ ಅನ್ವಯಿಸುವಂಥವು. ಆದರೆ ನಾಲ್ಕನೆಯ ಸಾಲು ಮನುಷ್ಯನ (ಶಿವಭಕ್ತರ) ಇಬ್ಬಗೆಯ ನೀತಿಯನ್ನು ಚಿತ್ರಿಸುತ್ತದೆ. ರಾಜಸತ್ತೆ ಹಾಗೂ ಪುರೋಹಿತ ಶಾಹಿಗಳ ಗುಣಗಾನ ಮಾಡುವ ಶಿವಶರಣರನ್ನು ಕಂಡು ಜೇಡರದಾಸಿಮಯ್ಯ ಅಸಹ್ಯಪಡುತ್ತಿದ್ದಾನೆ.

ಪಂಪ, ರನ್ನ, ಪೊನ್ನರಂಥ ಜೈನಕವಿಗಳು ರಾಜಾಶ್ರಯದಲ್ಲಿದ್ದುಕೊಂಡು ಆಗಮಿಕ ಕಾವ್ಯಗಳ ರಚನೆಯ ಜತೆಗೆ ಲೌಕಿಕ ಕಾವ್ಯಗಳ ರಚನೆಯನ್ನೂ ಮಾಡಿದರು. ಅವರು ಲೌಕಿಕ ಕಾವ್ಯಗಳಲ್ಲಿ ತಮ್ಮ 'ಆಶ್ರಯದಾತ ರಾಜರನ್ನು' ಬಾಯಿ ತುಂಬ ಹೊಗಳುತ್ತಿದ್ದರು. ಇಂತಹ ಕವಿಗಳನ್ನೂ ಇಂತಹ ಕಾವ್ಯರಚನೆಯನ್ನೂ ಆತ ಟೀಕೆಮಾಡುತ್ತಿರುವಂತಿದೆ. ಮುಂದೆ ಬಂದ ಜನ, ರಾಘವಾಂಕರೂ ಇದಕ್ಕೆ ಹೊರತಲ್ಲ. ಈ ಸಂದರ್ಭದಲ್ಲಿ ಪಂಪಕವಿಯ 'ಕವಿತೆಯೊಳ್ ಆಸೆಗೆಯ್ವ ಫಲಮಾವುದೊ? ಪೂಜೆ, ನೆಗಟ್ಟೆ, ಲಾಭಮೆಂಬಿವೆ ವಲಂ ಎಂಬ ಮಾತನ್ನೂ 'ಓಲಗಿಸಿ' ಬಾಳ್ವುದೆ ಕಷ್ಟಮಿಳಾಧಿನಾಥರಂ' ಎಂಬ ಮಾತನ್ನೂ ಪರಿಭಾವಿಸಬೇಕು.

ಈ ವಚನದ ಭಾಷೆ ತುಂಬ ಸರಳವಾಗಿದೆ. ಆದರೆ ಅರ್ಥಗರ್ಭಿತವಾದದ್ದು. 'ಉಂಡು', 'ಕುನ್ನಿ', 'ಏನನೆಂಬೆ' ಎಂಬ ಅಚ್ಚಗನ್ನಡ ಶಬ್ದಗಳಲ್ಲಿರುವ ಅವಹೇಳನ, ಹಂಗಿನ ದೃಷ್ಟಿಗಳನ್ನು ಪರಿಭಾವಿಸಬೇಕು. ಪ್ರತಿಯೊಂದು ಶಬ್ದವೂ ಅರ್ಥಸಂಪತ್ತಿನಿಂದ ಕೂಡಿದೆ. ಶಬ್ದಗಳ ಬಳಕೆ

ಕಿವಿಗೆ ಮುದವನ್ನು ನೀಡುತ್ತದೆ. ಅನುಪ್ರಾಸದಂತಹ ಶಬ್ದಾಲಂಕಾರದ ಬಳಕೆ ವಚನಕಾರನಿಗೆ ಅರಿವಿಲ್ಲದಂತೆಯೇ ಬಂದಿದೆ. ಏಕೆಂದರೆ ಕವಿತೆ ಬರೆಯಬೇಕೆಂಬುದು ಜೇಡರದಾಸಿಮಯ್ಯನ ಉದ್ದೇಶವಲ್ಲ. ಧನ್ಯಭಾವವನ್ನಷ್ಟೇ ಸೂಚಿಸುವುದು ಆತನ ಉದ್ದೇಶವಾಗಿದೆ. ಆತನಲ್ಲಿ ಕವಿಹೃದಯವಿದ್ದುದರಿಂದ ಈ ವಚನ ಒಂದು ಸುಂದರ ಭಾವಗೀತೆಯಂತಾಗಿಬಿಟ್ಟಿದೆಯಷ್ಟೆ!

ಈ ವಚನದ ಕೆಲವು ವರ್ಣಗಳ ಪುನರಾವರ್ತನೆಯನ್ನು ಗಮನಿಸಬೇಕು. 'ಳ'-೫ ಬಾರಿ, 'ನ'-೧೪ ಬಾರಿ, 'ಮ್ಮ'-೫ ಬಾರಿ 'ನಿಮ್ಮ'-೪ ಬಾರಿ, 'ಸು'-೨ ಬಾರಿ, 'ದ'-೫ ಬಾರಿ, 'ವ'-೩ ಬಾರಿ ಬಂದಿವೆ. 'ಇಳೆ', ಬೆಳೆ, ಸುಳಿ' ಎಂಬ ಜೋಡಿ ಅಕ್ಷರಗಳ ಬಳಕೆ, 'ದಾನ', 'ನಿಮ್ಮ' ಎಂಬ ಜೋಡಿ ಅಕ್ಷರಗಳ ಒತ್ತಿನಬಳಕೆ ಕವಿತ್ವದ ಮಾದರಿಗೆ ಒಂದು ನಿದರ್ಶನವಾಗಿದೆ. ಇಲ್ಲಿನ ಅರ್ಥಗಾಂಭೀರ್ಯ ಹಾಗೂ ಶಬ್ದಾಲಂಕಾರದ ಬೆಡಗನ್ನು, ವಚನವನ್ನು ಜೋರಾಗಿ ವಾಚಿಸುವುದರಿಂದ ಪರಿಭಾವಿಸಿಕೊಳ್ಳಬಹುದು.

'ಇಳೆ ನಿಮ್ಮ ದಾನ, ಬೆಳೆ ನಿಮ್ಮ ದಾನ
ಸುಳಿದು ಬೀಸುವ ವಾಯು ನಿಮ್ಮ ದಾನ'

ಎಂಬ ಸಾಲುಗಳಲ್ಲಿರುವ ಆದಿಪ್ರಾಸ ಮತ್ತು ಅಂತ್ಯ ಪ್ರಾಸ (ಳ–ನ) ಹಿತವಾಗಿದೆ. 'ಇಳೆ ನಿಮ್ಮ ದಾನ, ಬೆಳೆ ನಿಮ್ಮ ದಾನ' ಎಂಬ ಸಾಲಿನಲ್ಲಿ ಆಂತರಿಕ ಪ್ರಾಸದೊಡನೆ ಆಂತರಿಕಲಯವು ಎದ್ದು ಕಾಣುತ್ತದೆ. ಅನಂತರ ಪಾದವು ಪಾದದೊಡನೆ ಲಯವನ್ನು ಪಡೆಯುತ್ತದೆ. ಲಯಮಾತ್ರಾ ಘಟಿತವಾಗಬಹುದು; ಇಲ್ಲವೆ ಸಮೀಪವರ್ತಿ ಯಾಗಬಹುದು. ರಚನೆ ಹಾಗೂ ನಿರೂಪಣೆಯ ಒಟ್ಟಂದದ ದೃಷ್ಟಿಯಿಂದ ಸ್ವಚ್ಛಂದ ಲಯವು ಒಂದು ಬಗೆಯ ಸಮತೂಕವನ್ನು ಸಾಧಿಸುತ್ತದೆ.

'ಇಳೆ ನಿಮ್ಮ ದಾನ'– ಇಲ್ಲಿ ೪, ೪ ಮಾತ್ರೆಗಳ ೨ ಗಣ (ಅದರಂತೆಯೇ 'ಬೆಳೆ ನಿಮ್ಮ ದಾನ' ಎಂಬ ಪಾದ), ಅದರಂತೆಯೇ ಇರುವ– ಗಣದೊಡನೆ ಒಳಪ್ರಾಸಸಹಿತವಾಗಿ ಸ್ಫುಟವಾದ ಲಯವನ್ನು ಸಾಧಿಸುತ್ತದೆ. ಕಂದಪದ್ಯದ ಎರಡನೆಯ ಹಾಗೂ ನಾಲ್ಕನೆಯ ಪಾದಗಳಂತೆ ಇದು ಕಂಡು ಬರುತ್ತದೆ. ಆದರೆ ಮುಂದಿನ ಪಾದಗಳಲ್ಲಿ ಮಾತ್ರಾನಿಯತಿ ಉಳಿಯುವುದಿಲ್ಲ. 'ಸುಳಿದು ಬೀಸುವ ವಾಯು ನಿಮ್ಮ ದಾನ' ಎಂಬ ಸಾಲಿನಲ್ಲಿ ಒಟ್ಟು ಹದಿನಾರು ಮಾತ್ರೆಗಳಿದ್ದರೂ ೩,೪,೩,೩,೩ ಎಂಬಂತೆ ಮಾತ್ರೆಗಳ ಗಣಗಳಿದ್ದು ಒಟ್ಟಾರೆ ಮೊದಲನೆಯ ಸಾಲಿನೊಡನೆ ಈ ಸಾಲೂ ಲಯವನ್ನು ಸಾಧಿಸುತ್ತದೆ. ಆದ್ದರಿಂದ ಇದು ಒಂದು ಸರಳವಾದ ರಚನೆಯಾಗಿದೆ. ಹೀಗಾಗಿ ಸ್ವಚ್ಛಂದ ಲಯದಲ್ಲಿ ವಿಸ್ತಾರವಾದ ಒಂದು ಪಾದಕ್ಕೆ ('ನಿಮ್ಮ ದಾನವನುಂಡು ಅನ್ಯರ ಹೊಗಳುವ' ಎಂಬ ೧೮ ಮಾತ್ರೆಗಳ ಪಾದಕ್ಕೆ – ೩,೪,೩,೪,೪ ಮಾತ್ರೆಗಳ ಗಣಗಳಿಗೆ) ಪಾದವೇ ಸದೃಶ ಪಾದದೊಡನೆ ಲಯ ಸಾಧಿಸುವುದು ಒಂದು ವೈಶಿಷ್ಟ್ಯವೆಂದೇ ಹೇಳಬೇಕು. ಕೊನೆಯ ಪಾದ ಎರಡನೆಯ ಪಾದದ ಗಣಗಳಂತೆಯೇ ಇದೆ. ಈ ಎರಡೂ ಪಾದಗಳು ವಿಶಿಷ್ಟ ರೀತಿಯಲ್ಲಿ ಲಯವನ್ನು ಸಾಧಿಸುವುದು ಗಮನಾರ್ಹವಾದ ಅಂಶವಾಗಿದೆ. ಇಲ್ಲಿ ಪಾದಕ್ಕೆ ಪಾದವೇ ಸಮವಾಗಿದೆ. ಗದ್ಯದ ಸರಳತೆ, ಲಯದಬಳಕೆ, ಪದ್ಯದನಿಯತಿ ನಿರ್ಬಂಧವಿಲ್ಲದೆ ವಚನರೂಪವು ಸ್ವಚ್ಛಂದಲಯದ ಸಹಾಯದಿಂದ ಸಾರ್ಥಕ್ಯವನ್ನು ಹೇಗೆ ಪಡೆಯುತ್ತದೆ ಎಂಬುದನ್ನು ಪರಿಭಾವಿಸಬೇಕು.

ಕೆಲವು ವಚನಗಳಲ್ಲಿ ಪಾದಗಳ ಲಯವೇ ಮುಖ್ಯವಾಗುತ್ತದೆ. ಒಂದು ಮಾತನ್ನಂತೂ ಇಲ್ಲಿ ಹೇಳಲೇಬೇಕು. ಜೇಡರದಾಸಿಮಯ್ಯನ ವಚನಗಳಲ್ಲಿ 'ವಚನರೂಪವು' ತನ್ನದೇ ಆದ ಒಂದು ಆಕೃತಿಯನ್ನು ಪಡೆಯಿತು. ಮುಂದಿನ ವಚನಕಾರರಿಗೆ ಇದು ದಾರಿದೀಪವಾಯಿತು ಎಂಬ ಡಾ. ರಂ. ಶ್ರೀಮುಗಳಿಯವರ ಮಾತು ಸಮಂಜಸವಾಗಿದೆ.

ಜೇಡರದಾಸಿಮಯ್ಯನ ವಚನಗಳಲ್ಲಿ ಬಹುತೇಕ ವಚನಗಳು ನಾಲ್ಕು ಸಾಲಿನವು.[೨] ತ್ರಿಪದಿರೂಪಕ್ಕೂ ಇವನ ನಾಲ್ಕು ಸಾಲಿನವಚನ ರೂಪಕ್ಕೂ ಕೆಲವು ಸಾಮ್ಯಗಳಿದ್ದಂತಿವೆ. ಇದನ್ನು ಪ್ರತ್ಯೇಕವಾಗಿ ಚರ್ಚಿಸಬೇಕಾಗಿದೆ. ಕುತೂಹಲಕ್ಕಾಗಿ ಲಯವನ್ನಾಧರಿಸಿ ಈ ವಚನಕ್ಕೆ ಪ್ರಸ್ತಾರ ಹಾಕಿದರೆ ಏನಾಗುತ್ತದೆಂಬುದನ್ನು ಪರಿಶೀಲಿಸಬಹುದು.

i.
೪ ೪ ೪ ೪
UU | –U | –U | UU | –U | –U |
ಇಳೆ | ನಿಮ್ಮ | ದಾನ | ಬೆಳೆ | ನಿಮ್ಮ | ದಾನ | = ೧೬ ಮಾತ್ರೆಗಳು

೩ ೪ ೩ ೩ ೩
UUU | –UU | –U | UU | UUUU |
ಸುಳಿದು | ಬೀಸುವ | ವಾಯು | ನಿಮ್ಮ | ದಾನ | = ೧೬ ಮಾತ್ರೆಗಳು

೩ ೪ ೩ ೪ ೪
UUU | –UU | | –U | U U U U |
ನಿಮ್ಮ | ದಾನವ | ನುಂಡು | ಅನ್ಯರ | ಹೊಗಳುವ | = ೧೮ ಮಾತ್ರೆಗಳು

೩ ೪ ೩ ೩ ೩
–U | U– – | | –U | –U | –U
ಕುನ್ನಿ | ಗಳನೇ | ನೆಂಬೆ | ರಾಮ | ನಾಥ | = ೧೬ ಮಾತ್ರೆಗಳು

ii.
೫ ೫ ೬
೨ + ೩ ೩ + ೨ ೩ + ೩
UU –U –U UU –U –U
ಇಳೆ ನಿಮ್ಮ | ದಾನ | ಬೆಳೆ | ನಿಮ್ಮ | ದಾನ | = ೧೬ ಮಾತ್ರೆಗಳು

೫ ೫ ೬
೩ + ೨ ೨ + ೩ ೨ + ೩
UUU –U U – U U | –U –U
ಸುಳಿದು ಬೀ | ಸುವ ವಾಯು | ನಿಮ್ಮ ದಾನ | = ೧೬ ಮಾತ್ರೆಗಳು

೫ ೫ ೫
೩ + ೨ ೨ + ೩ ೨ + ೩ ೩
–U –U|U –U| –U U UU| UU|
ನಿಮ್ಮ ದಾ|ನವನುಂಡು| ಅನ್ಯರ ಹೊ|ಗಳುವ| = ೧೮ ಮಾತ್ರೆಗಳು

೫ ೫ ೫
೨+೩ ೨+೩ ೨ + ೩
–UUU| – –U| – U – U|
ಕುನ್ನಿಗಳ|ನೇನೆಂಬೆ| ರಾಮನಾಥ| = ೧೬ ಮಾತ್ರೆಗಳು

ಪ್ರಸ್ತಾರ ಹಾಕಿ ನೋಡಿದರೆ ವಚನದುದ್ದಕ್ಕೂ ಒಂದು ಬಗೆಯ ನಿಯತ ಲಯದೊಡನೆ ಸ್ವಚ್ಛಂದ ಲಯವೂ ಎದ್ದು ಕಾಣುತ್ತದೆ. ಪ್ರತಿಪಾದದಲ್ಲಿ ೧೬ ಮಾತ್ರೆಗಳ (ಮೂರನೆಯ ಸಾಲಿನಲ್ಲಿ ೧೮ ಮಾತ್ರೆಗಳು) ಲೆಕ್ಕಾಚಾರವೊಂದು ವಿಸ್ಮಯಕರವಾದ ರೀತಿಯಲ್ಲಿ ಬರುತ್ತದೆ. ಒಟ್ಟು ಸಾಲುಗಳನ್ನು ತೆಗೆದುಕೊಂಡಾಗ ಮಂದಾನಿಲರಗಳೆಯ ಸಮೀಪದ ಓಟವೊಂದು ಇಲ್ಲಿ ಗೋಚರಿಸುತ್ತದೆ; ಆದರೆ ನಾಲ್ಕು ಮಾತ್ರೆಗಳ ಗಣವಿಭಾಗ ಮಾಡಲು ಸಾಧ್ಯವಾಗುವುದಿಲ್ಲ. ಅರ್ಥಾನುಸಾರದ ಗಣವಿಭಾಗ ಮಾಡಿನೋಡಿದರೆ ೫ (೨+೩ ಇಲ್ಲವೆ ೩+೨ ಇಲ್ಲವೆ ೩+೩) ಮಾತ್ರೆಗಳ ಗಣಗಳಂತೆ ಕಂಡರೂ ಅಲ್ಲಿ ೪ ಮಾತ್ರೆಗಳ ಲೆಕ್ಕಾಚಾರವನ್ನು (ಕೆಲವು ಕಡೆ) ಹಾಕಬಹುದು. ಇದರ ಮರ್ಮವೇನು ಯೋಚಿಸಬೇಕು.

ಒಟ್ಟಿನಲ್ಲಿ ಜೇಡರದಾಸಿಮಯ್ಯನ ವಚನಗಳಲ್ಲಿ ಮಾತ್ರಾ ಲಯಕ್ಕೆ ಸಮಾನ ಇಲ್ಲವೆ ಸಮೀಪವರ್ತಿ ಸ್ವಚ್ಛಂದಲಯದ ಉದಾಹರಣೆಗಳು ಕಂಡುಬರುತ್ತವೆ; ಖಚಿತವಾಗಿ ಅಳೆಯುವ ಮಾನದಂಡ ಕಂಡುಹಿಡಿಯಲು ಸಾಧ್ಯವಿಲ್ಲ. ವಚನವಚನಕ್ಕೂ ಅದರದೇ ಆದ ಮಾನದಂಡ ವನ್ನು ಹುಡುಕಬೇಕಾಗುತ್ತದೆ.

* * * *

**ಅಡಿಟಿಪ್ಪಣಿಗಳು :**

೧. ಜೇಡರದಾಸಿಮಯ್ಯನ ಈ ವಚನ 'ಸಮಗ್ರ ವಚನ ಸಂಪುಟ': ೭, ಸಂಕೀರ್ಣ ವಚನ ಸಂಪುಟ : ೨ರಲ್ಲಿ ೨೫ನೆಯದು (ಪುಟ : ೨೪೫) : ಸಂಪಾದಕರು : ಡಾ.ಎಸ್. ವಿದ್ಯಾಶಂಕರ; ಪ್ರ : ಕರ್ನಾಟಕ ಸರ್ಕಾರ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು – ೧೯೯೩.

ಮೇಲಿನ ವಚನದರ್ಥವನ್ನು ಪುಷ್ಟೀಕರಿಸುವಂತಹ ಮತ್ತೆರಡು ವಚನಗಳಿವೆ. (ವಚನ ಸಂಖ್ಯೆ : ೩೯, ಪುಟ : ೨೪೮ ವಚನಸಂಖ್ಯೆ : ೬೭, ಪುಟ : ೨೫೫). ಆ ವಚನಗಳು ಹೀಗಿವೆ :

"ಎತ್ತು ನಿಮ್ಮ ದಾನ, ಬಿತ್ತು ನಿಮ್ಮ ದಾನ
ಸುತ್ತಿ ಹರಿವ ಸಾಗರವೆಲ್ಲ ನಿಮ್ಮ ದಾನ
ನಿಮ್ಮ ದಾನವನುಂಡು ಅನ್ಯರ ಹೊಗಳುವ
ಕುನ್ನಿಗಳನೇನೆಂಬೆ ಹೇಳ? ರಾಮನಾಥ".

"ಕಾಯ ನಿಮ್ಮ ದಾನ, ಜೀವ ನಿಮ್ಮ ದಾನ
ಕಾಯ ಜೀವ ಉಳ್ಳಲ್ಲಿಯೇ ನಿಮ್ಮ ಪೂಜಿಸದ
ನಾಯಿಗಳನೇನೆಂಬೆ ಹೇಳ? ರಾಮನಾಥ".

ಮೇಲಿನ ಮೂರೂ ವಚನಗಳಲ್ಲಿ 'ನಾಯಿಯ ಚಿತ್ರ'ವಿದೆ; 'ನಿಮ್ಮ' ಎಂಬ ಬಹುವಚನ ಪ್ರಯೋಗವಿದೆ. 'ಇಳೆ ನಿಮ್ಮ ದಾನ' ಎಂಬ ವಚನದ ಮೂರು ಮತ್ತು ನಾಲ್ಕನೆಯ ಸಾಲುಗಳು ಹಾಗೂ 'ಎತ್ತು ನಿಮ್ಮ ದಾನ' ಎಂಬ ವಚನದ ಮೂರು ಮತ್ತು ನಾಲ್ಕನೆಯ ಸಾಲುಗಳಲ್ಲಿ ('ಹೇಳ' ಎಂಬ ಶಬ್ದವನ್ನುಳಿದು) ಯಾವ ವ್ಯತ್ಯಾಸವೂ ಇಲ್ಲ. 'ಎತ್ತು ನಿಮ್ಮ ದಾನ' ಎಂಬ ವಚನದ ನಾಲ್ಕನೆಯ ಸಾಲಿಗೂ 'ಕಾಯ ನಿಮ್ಮ ದಾನ' ಎಂಬ ವಚನ ಮೂರನೆಯ ಸಾಲಿಗೂ ವ್ಯತ್ಯಾಸವಿಲ್ಲ. ಅಲ್ಲಿ 'ಕುನ್ನಿ' ಎಂಬ ಶಬ್ದವಿದ್ದರೆ ಇಲ್ಲಿ 'ನಾಯಿ' ಎಂಬ ಶಬ್ದವಿದೆ. ಮೊದಲನೆಯ ವಚನ ಒಂದು ಸಮಗ್ರ ಪ್ರತಿಮೆಯಾದರೆ ಆ ಮೇಲಿನ ವಚನಗಳು ಆ ವಚನದ ಸ್ಪಷ್ಟೀಕರಣದಂತಿವೆ. ಜಾಳು ಜಾಳಾಗಿವೆ; ಜೇಡರ ದಾಸಿಮಯ್ಯ ಈ ವಚನಗಳನ್ನು ಬರೆಯದೇ ಹೋಗಿದ್ದಿದ್ದರೇನೂ ನಷ್ಟವಾಗುತ್ತಿರಲಿಲ್ಲ. ಜಗತ್ತಿನ ಸರ್ವಸ್ವವನ್ನೂ ತನ್ನೊಡಲಲ್ಲಿ ತುಂಬಿಟ್ಟುಕೊಂಡಿರುವ ಶ್ರೇಷ್ಠ ವಚನವನ್ನು ಬರೆದಾದ ಮೇಲೆ ಜಗತ್ತಿನಲ್ಲಿ 'ಇದೆಲ್ಲಾ ಇದೆ' ಎಂದು ಒಂದೊಂದನ್ನೂ ಬಿಡಿಬಿಡಿಯಾಗಿ ಬಿಡಿಸಿ ಹೇಳಲು ಮತ್ತೆರಡು ವಚನಗಳನ್ನು ಆತ ಬರೆಯುವ ಅಗತ್ಯವಿರಲಿಲ್ಲ. ಆದರೂ ಅವನ ವಿನಯ, ಕೃತಜ್ಞತೆಯಂಥ ಮನೋಧರ್ಮಗಳು ಹೃದಯಂಗಮವಾಗಿ ವ್ಯಕ್ತವಾಗಿವೆ. ಇಂಥ ಮನೋಧರ್ಮಗಳನ್ನು ಎಷ್ಟು ವರ್ಣಿಸಿದರೂ ಸಾಲದು ಎಂಬುದು ಆತನ ಉದ್ದೇಶವಿದ್ದಂತಿದೆ;

೨. ಕನದಾಸರ ಈ ಕೆಳಕಂಡ ಕೀರ್ತನೆಯನ್ನು ಈ ವಚನದೊಡನೆ ಹೋಲಿಸಿನೋಡಬಹುದು; ಎರಡರಲ್ಲಿಯೂ ಅರ್ಥಸಾದೃಶ್ಯವಿದೆ.

"ತಲ್ಲಣಿಸದಿರು ಕಂಡ್ಯ ತಾಳು ಮನವೆ ॥ಪ॥
ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ ॥ ಅ ಪ ॥
ಬೆಟ್ಟದಾ ತುದಿಯಲ್ಲಿ ಹುಟ್ಟಿದಾ ವೃಕ್ಷಕ್ಕೆ
ಕಟ್ಟೆಯನು ಕಟ್ಟಿ ನೀರೆರೆದವರು ಯಾರೊ
ಹುಟ್ಟಿಸಿದ ದೇವ ತಾ ಹೊಣೆಗಾರನಾಗಿರಲು
ಗಟ್ಯಾಗಿ ರಕ್ಷಿಪನು ಇದಕೆ ಸಂಶಯವಿಲ್ಲ ॥ ೧ ॥

ಅಡವಿಯೊಳಗಾಡುವ ಮೃಗಪಕ್ಷಿಗಳಿಗೆಲ್ಲ
ಅಡಿಗಡಿಗೆ ಆಹಾರವಿತ್ತವರು ಯಾರೊ
ಹಡೆದ ಜನನಿಯ ತೆರದಸ್ವಾಮಿ ಹೊಣೆಗೀಡಾಗಿ
ಬಿಡದೆ ರಕ್ಷಿಪನಿದಕೆ ಸಂದೇಹಬೇಡ ॥ ೨ ॥

ಕಲ್ಲಿನಲಿ ಹುಟ್ಟಿ ತಾ ಕೂಗುವಕಪ್ಪೆಗೆ
ಅಲ್ಲಿ ಆಹಾರವನು ತಂದೀಯುವವರ್ಯಾರೊ
ಬಲ್ಲಿದನು ಕಾಗಿನೆಲೆಯಾದಿ ಕೇಶವರಾಯ
ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ ॥ ೩ ॥

(ಜನಪ್ರಿಯ ಕನಕಸಂಪುಟ : ಕೀರ್ತನೆಯ ಸಂಖ್ಯೆ : ೧೦. ಪ್ರ : ಕರ್ನಾಟಕ ಸರ್ಕಾರ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು – ೧೯೮೯)

೩. ಮೇಲಿನ ಸಾಲು 'ಸುಳಿದು ಸೂಸುವ ಗಾಳಿ ನಿಮ್ಮ ದಾನ' ಎಂದು ಇದ್ದಿದ್ದರೆ ಶಬ್ದಾಲಂಕಾರಕ್ಕೆ ಮತ್ತಷ್ಟು ಶೋಭೆಬರುತ್ತಿತ್ತು. ಜೇಡರದಾಸಿಮಯ್ಯನಿಗೆ ಇದು ಏಕೆ ಹೊಳೆಯಲಿಲ್ಲವೋ? ಕಾವ್ಯವನ್ನು ಬರೆಯುವುದು ವಚನಕಾರರ ಉದ್ದೇಶವಾಗಿರಲಿಲ್ಲ; ಸಮಾಜಸುಧಾರಣೆ ಅವರ ಮುಖ್ಯ ಉದ್ದೇಶವಾಗಿತ್ತು. ಆದರೂ 'ಅವರದು ಕವಿ ಹೃದಯ. ಹೀಗಾಗಿ ಕೆಲವು ವಚನಗಳು ಭಾವಗೀತೆಯ ಸುಂದರ ಮಾದರಿಗಳಂತೆ ಕಂಡುಬರುತ್ತವೆ.

೪. ಜೇಡರದಾಸಿಮಯ್ಯ 'ಶಿವನನ್ನು ಪ್ರಶ್ನಿಸುವ, ಛಾಲೆಂಜ್ ಮಾಡುವ ವಚನಗಳಲ್ಲಿ 'ನಿನ್ನ' ಎಂಬ ಏಕವಚನ ಶಬ್ದವನ್ನೂ, 'ಮೆಚ್ಚುಗೆ, ಕೃತಜ್ಞತೆ, ಗೌರವದಂಥ' ದಿವ್ಯಭಾವಗಳನ್ನು ನಿರೂಪಿಸುವಾಗ 'ನಿಮ್ಮ' ಎಂಬ ಬಹುವಚನ ಶಬ್ದವನ್ನೂ ಬಳಸುತ್ತಾನೆ. ಇದು ಪರಿಭಾವನಾಯೋಗ್ಯ ವಿಚಾರವಾಗಿದೆ.

೫. ಜೇಡರದಾಸಿಮಯ್ಯನ ೧೭೬ ವಚನಗಳಲ್ಲಿ 'ನಾಯಿ' (ಕುನ್ನಿ, ಶುನಕ) ಎಂಬ ಶಬ್ದದ ಬಳಕೆ ೧೭ ಕಡೆ ಬಂದಿದೆ: 'ಅಜ್ಞಾನ, ಚಂಚಲ, ಹಂಗು, ಆಸೆಬುರುಕುತನ, ಸಣ್ಣಮಗು, ಬುದ್ಧಿಹೀನತೆಗಳ ಸಂಕೇತವಾಗಿ ಈ ಶಬ್ದ ಬಂದಿದೆ.

೬. ಈ ಸಂದರ್ಭದಲ್ಲಿ ಹರಿಹರ ಕವಿಯ ಕವಿತೆಯೊಂದನ್ನು ಸ್ಮರಿಸಿಕೊಳ್ಳುವುದು ಅನೌಚಿತ್ಯವಾಗಲಾರದು :

"ಮನುಜರ ಮೇಲೆ ಸಾವವರ ಮೇಲೆ ಕನಿಷ್ಠರ ಮೇಲೆಯಕ್ಕಟಾ
ತನತನಗಿಂದ್ರ ಚಂದ್ರ ರವಿಕರ್ಣದಧೀಚಿಬಲೀಂದ್ರನೆಂದು ಮೇಣ್
ಅನವರತಂ ಪೊಗಳ್ದು ಕೆಡಬೇಡೆಲೆ ಮಾನವ ನೀನಹರ್ನಿಶಂ
ನೆನೆ ಪೊಗಳರ್ಚಿಸೆಮ್ಮ ಕಡುಸೊಂಪಿನ ಪೆಂಪಿನ ಹಂಪೆಯಾಳ್ದನಂ"

(ಪಂಪಾಶತಕ : ೮೨)

ಪಾಶ್ಚಿಮಾತ್ಯರಲ್ಲಿ ನರಸ್ತುತಿ ಮಾಡದೆ ಈಶ್ವರಸ್ತುತಿಗೇ ನಾಲಗೆಯನ್ನು ಮೀಸಲಿರಿಸಿದ ಯೇಸು, ಸಾಕ್ರಟೀಸ್; ಕನ್ನಡದ ಬಸವಣ್ಣ, ಪುರಂದರದಾಸರು; ತೆಲುಗುವಿನ ಶ್ರೀನಾಥ; ಬಂಗಾಲದ ರವೀಂದ್ರನಾಥ ಟಾಗೋರ್ ಅವರೂ ಈ ವರ್ಗಕ್ಕೆ ಸೇರಿದವರು.

೭. ಈತನಿಗೂ ಹಿಂದಿದ್ದ ಕೊಂಡಗುಳಿಕೇಶಿರಾಜನು ತನ್ನ ಬಹುತೇಕ ಕೃತಿಗಳನ್ನು ಕಂದಪದ್ಯಗಳಲ್ಲಿ ರಚಿಸಿದ್ದಾನೆ. ಅವನ ಪ್ರಭಾವಕ್ಕೀಡಾದ ಜೇಡರದಾಸಿಮಯ್ಯ ನಾಲ್ಕು ಸಾಲಿನ ವಚನಗಳನ್ನು ಬರೆದಿರುವ ಸಾಧ್ಯತೆಯಿದೆ. ೨, ೩, ೫ ಸಾಲಿನ ವಚನಗಳೂ ಇವೆ.

**ಸಹಾಯಕ ಗ್ರಂಥಸೂಚಿ :**


೧. ಶರಣ ಸಾಹಿತ್ಯ ಚಿಂತನ: ಪ್ರೊ.ಜಿ.ಅಬ್ದುಲ್ ಬಷೀರ್. ಪ್ರ: ಬಸವ ಸಮಿತಿ. ಬಸವ ಭವನ. ಬೆಂಗಳೂರು – ೫೬೦೦೦೧. ೨೦೦೪ – ದ್ವಿತೀಯ ಮುದ್ರಣ.

೨. ವಚನಸಾಹಿತ್ಯ ; ಡಾ. ಎಂ. ಚಿದಾನಂದಮೂರ್ತಿ. ಪ್ರ :ಪ್ರಸಾರಾಂಗ. ಬೆಂಗಳೂರು ವಿಶ್ವವಿದ್ಯಾಲಯ. ಬೆಂಗಳೂರು – ೫೬೦೦೫೬.

೩. ಪ್ರಾಚೀನ ಕನ್ನಡ ಸಾಹಿತ್ಯ ರೂಪಗಳು : ಡಾ.ರಂ.ಶ್ರೀಮುಗಳಿ. ಪ್ರ : ಉಷಾಸಾಹಿತ್ಯ ಮಾಲೆ. ಮೈಸೂರು.

೪. ಚಿಂತನ : ಪ್ರೊ. ಜಿ. ಅಬ್ದುಲ್ ಬಷೀರ್, ಪ್ರ : ಪ್ರಕಾಶ ಸಾಹಿತ್ಯ, ಅರಳೇ ಪೇಟೆ, ಬೆಂಗಳೂರು – ೧೯೯೯.

೫. ಸಾಮಾಜಿಕ ಚಿಂತನೆಗಳು : ಪ್ರೊ. ಜಿ. ಅಬ್ದುಲ್ ಬಷೀರ್. ಪ್ರ: ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು – ೫೬೦೦೧೮.




# ೬. ಮೈಲಾರಲಿಂಗ ಆಚರಣೆ : ಒಂದು ಸಾಂಸ್ಕೃತಿಕ ಅಧ್ಯಯನ

• ನಾಗರಾಜ ಹೊಸೂರಕರ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಹಾಗೂ ಹಂಪಿ ಕನ್ನಡ ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ದಿನಾಂಕ: ೧೧-೦೩-೨೦೦೭ರ ಭಾನುವಾರದಂದು ಪಿಎಚ್.ಡಿ ಅಧ್ಯಯನಾರ್ಥಿಗಳ ವಿಚಾರಗೋಷ್ಠಿ ಏರ್ಪಾಡಾಗಿತ್ತು. ಪ್ರತಿಷ್ಠಾನದ ಅಧ್ಯಕ್ಷರಾದ ಶ್ರೀನಿವಾಸರಾಜು ಅವರು ಗೋಷ್ಠಿಯ ಅಧ್ಯಕ್ಷತೆ ವಹಿಸಿದ್ದರು. ಸುಮಾರು ಹನ್ನೆರಡು ಜನ ಅಧ್ಯಯನಾರ್ಥಿಗಳು ಈ ಗೋಷ್ಠಿಯಲ್ಲಿ ಭಾಗವಹಿಸಿದ್ದರು.

ಅಧ್ಯಯನದ ವಿಷಯವನ್ನು ಮಂಡಿಸುತ್ತ ಅಧ್ಯಯನಾರ್ಥಿಯಾದ ನಾನು (ನಾಗರಾಜ ಹೊಸೂರಕರ್) ಮಾರ್ಗದರ್ಶಕರಾದ ಪ್ರೊ. ಡಿ.ಲಿಂಗಯ್ಯನವರ ಮಾರ್ಗದರ್ಶನದಲ್ಲಿ ಈವರೆಗೆ ನಡೆಸಿದ ಕ್ಷೇತ್ರಕಾರ್ಯ ಹಾಗೂ ಅಧ್ಯಯನದ ಕುರಿತಾಗಿ ವಿಚಾರ ಮಂಡಿಸಿದೆನು.

'ಮೈಲಾರಲಿಂಗ' ಕರ್ನಾಟಕದ ಜನಪದ ದೈವಗಳಲ್ಲಿ ಅತ್ಯಂತ ಪ್ರಸಿದ್ಧವಾದ ದೈವ. ದಕ್ಷಿಣ ಭಾರತದ ಕ್ಷೇತ್ರಗಳಲ್ಲಿ ಕಂಡುಬರುವ ಮೈಲಾರಲಿಂಗನ ಆಚರಣೆಗಳ ಮೇಲೆ ಬೆಳಕು ಚೆಲ್ಲುವುದು ಅಧ್ಯಯನದ ಪ್ರಮುಖ ಉದ್ದೇಶ.

ಎಲ್ಲ ಜನಪದ ದೈವಗಳಲ್ಲಿ ಇರುವಂತೆ ಮೈಲಾರ ಲಿಂಗನ ಕುರಿತಾಗಿಯೂ ಸಾಕಷ್ಟು ಕಥೆಗಳಿವೆ. ಇವುಗಳಲ್ಲಿ ತುಂಬ ಪ್ರಸಿದ್ಧವಾದುದು "ಪುರಾಣಗಳಲ್ಲಿ ಬರುವ ಮಣಿಕಾಸುರ ಹಾಗೂ ಮಲ್ಲಾಸುರನ ಕಥೆ." ಮಣಿಕ ಹಾಗೂ ಮಲ್ಲರನ್ನು ಮಣಿಸಿದ ಶಿವನೇ ಮೈಲಾರಲಿಂಗ ಅಥವಾ ಮಾಲತೇಶ ಎಂಬ ನಂಬಿಕೆ ಜನಪದರಲ್ಲಿದೆ.

ಬಳ್ಳಾರಿ ಜಿಲ್ಲೆಯ ಹೂವಿನಹಡಗಲಿ ತಾಲ್ಲೂಕಿನಲ್ಲಿರುವ ಮೈಲಾರಕ್ಷೇತ್ರವು ಮೈಲಾರಲಿಂಗನ ಮೂಲ ಸ್ಥಳ ಎಂಬ ನಂಬಿಕೆ

ಇದೆ. ಇತಿಹಾಸದಲ್ಲಿ ಅನೇಕ ಕಡೆ ಈ ದೈವದ ಕುರಿತಾದ ಉಲ್ಲೇಖಗಳಿವೆ. ಈ ಉಲ್ಲೇಖಗಳ ಆಧಾರದಿಂದ ಹೇಳುವುದಾದರೆ ಸುಮಾರು ಕ್ರಿಸ್ತಶಕ ೧೪೦೦ಕ್ಕೂ ಹಿಂದಿನಿಂದ ಈ ಕ್ಷೇತ್ರ ಪ್ರಸಿದ್ಧವಾಗಿದೆ.

ವರ್ಷದ ಹನ್ನೆರಡು ತಿಂಗಳೂ ಈ ಕ್ಷೇತ್ರದಲ್ಲಿ ಆಚರಣೆಗಳು ನಡೆದೇ ಇರುತ್ತವೆ. ವಿಶೇಷವಾಗಿ ಹುಣ್ಣಿಮೆಗಳಂದು ವಿಶೇಷ ಪೂಜೆಗಳು ನಡೆಯುತ್ತವೆ. ಭಾನುವಾರವನ್ನು ಮೈಲಾರಲಿಂಗನ ದಿನವೆಂದು ಪರಿಗಣಿಸುತ್ತಾರೆ.

ಉತ್ತರ ಕರ್ನಾಟಕದಲ್ಲಿ ಎಲ್ಲ ಜಾತಿ ಪಂಥಗಳಲ್ಲಿ ಮೈಲಾರಲಿಂಗನ ಭಕ್ತರಿದ್ದಾರೆ. ಬಳ್ಳಾರಿ, ಬಿಜಾಪುರ, ಬೆಳಗಾವಿ, ಗುಲ್ಬರ್ಗಾ ಮೊದಲಾದ ಉತ್ತರ ಕರ್ನಾಟಕದ ಜಿಲ್ಲೆಗಳು ಹಾಗೂ ದಕ್ಷಿಣ ಕರ್ನಾಟಕದ ಜಿಲ್ಲೆಗಳಾದ ಮಂಡ್ಯ, ಚಾಮರಾಜನಗರಗಳಲ್ಲಿ ಈ ಆಚರಣೆಯನ್ನು ವ್ಯಾಪಕವಾಗಿ ಕಾಣಬಹುದು.

ಮೈಲಾರಲಿಂಗನ ಆಚರಣೆಗಳಲ್ಲಿ ಪ್ರಮುಖವಾದವು ಗೊರವ ದೀಕ್ಷೆ, ಗೊರವರ ವಿಧಿ ವಿಧಾನಗಳು, ಹರಕೆಗಳು, ನಂಬಿಕೆಗಳು, ಜಾತ್ರೆ-ಉತ್ಸವಾದಿ ಆಚರಣೆಗಳು. ಇವುಗಳಲ್ಲಿ ಹರಕೆ ಹಾಗೂ ಉತ್ಸವಗಳು ಪ್ರದರ್ಶನ ಕಲೆಯಾಗಿಯೂ ಅಧ್ಯಯನ ಯೋಗ್ಯವಾಗಿವೆ.

ಶ್ರೀಕ್ಷೇತ್ರ ಮೈಲಾರದಲ್ಲಿ ನಡೆಯುವ ವಿಶೇಷ ಆಚರಣೆಯೆಂದರೆ 'ಕಾರ್ಣೀಕೋತ್ಸವ'. ಪ್ರತಿವರ್ಷ ಭಾರತ ಹುಣ್ಣಿಮೆಯಂದು ನಡೆಯುವ ಈ ಉತ್ಸವದಲ್ಲಿ ಕರ್ನಾಟಕ, ಆಂಧ್ರಪ್ರದೇಶ ಹಾಗೂ ಮಹಾರಾಷ್ಟ್ರ ರಾಜ್ಯಗಳಿಂದ ಸುಮಾರು ಎರಡು ಲಕ್ಷ ಜನ ಭಾಗವಹಿಸುತ್ತಾರೆ. ಈ ಸಂದರ್ಭದಲ್ಲಿ ನಡೆಯುವ ಕಾರ್ಣೀಕದ ಹೇಳಿಕೆ ಹಾಗೂ ಪವಾಡಗಳು ಆಚರಣೆಯ ಪ್ರಮುಖ ಅಂಶಗಳಾಗಿವೆ. ಪವಾಡಗಳಲ್ಲಿಸರಪಳಿ ಪವಾಡ, ಕಾಲು ಪವಾಡ, ಶಸ್ತ್ರಪವಾಡ, ಕೈಪವಾಡ, ಕೆನ್ನೆಪವಾಡ, ಕಾಯಿ ಪವಾಡಗಳು ಪ್ರಮುಖವಾದುವು. ಸುಮಾರು ೨೦೦ ವರ್ಷಗಳ ಹಿಂದೆ ಇದ್ದಿತೆನ್ನಲಾದ ಶಿರಸ್ ಪವಾಡದ ಉಲ್ಲೇಖವಿದೆಯಾದರೂ ಈಗ ಅದು ಕಂಡು ಬರುವುದಿಲ್ಲ.

ಮೈಲಾರನನ್ನು ಕುರಿತು ಈವರೆಗೆ ನಡೆದ ಅಧ್ಯಯನಗಳಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಡಾ॥ ಎಂ.ಬಿ. ನೇಗಿನಹಾಳ, ದ್ರಾವಿಡ ವಿಶ್ವವಿದ್ಯಾಲಯದ ಡಾ॥ ವೆಂಕಟೇಶ, ಕನ್ನಡ ವಿಶ್ವವಿದ್ಯಾಲಯದ ಡಾ॥ ಮಂಜುನಾಥ ಬೇವಿನಕಟ್ಟಿ, ಮಹಾರಾಷ್ಟ್ರದ ಢೇರೆ ಅವರ ಅಧ್ಯಯನಗಳು ಗಮನಾರ್ಹ. ಮೈಲಾರಲಿಂಗನ ಪುರಾಣಗಳು ಹಾಗೂ ಇತರೆ ಲಘು ಸಾಹಿತ್ಯಗಳೂ ಪ್ರಕಟವಾಗಿವೆ.

ಮೈಲಾರ ಲಿಂಗನನ್ನು ಕುರಿತಾದ ಸಾಹಿತ್ಯ ವಿಪುಲವಾಗಿದ್ದರೂ ಲಭ್ಯತೆ ತುಂಬ ಕಡಿಮೆ. ಮೈಲಾರಲಿಂಗನ ಕಥಾನಕವನ್ನು ಹಂಪಿ ಕನ್ನಡ ವಿಶ್ವವಿದ್ಯಾಲಯದ ಪ್ರವಾಚಕರಾದ ಡಾ॥ ಮಂಜುನಾಥ ಬೇವಿನಕಟ್ಟಿಯವರು ಸಂಗ್ರಹಿಸಿದ್ದಾರೆ; ಕೆಲ ಜಪದ ಗೀತೆಗಳು ಸಂಗ್ರಹಿತವಾಗಿವೆ. ಆಗಬೇಕಾದ ಕೆಲಸ ಇನ್ನೂ ಬಹಳಷ್ಟಿದೆ.

ವಿಚಾರ ಮಂಡನೆಯ ನಂತರ ನಡೆದ ಪ್ರಶ್ನೋತ್ತರ ಗೋಷ್ಠಿಯಲ್ಲಿ ಇನ್ನೂಹಲವಾರು

ವಿಷಯಗಳನ್ನು ಚರ್ಚಿಸಲಾಯಿತು. ಅನೇಕ ಉಪಯುಕ್ತ ಸಲಹೆಗಳನ್ನು ಸ್ವೀಕರಿಸಲಾಯಿತು. ಈ ನಿಟ್ಟಿನಲ್ಲಿ ವಿಚಾರ ಸಂಕಿರಣವು ನನ್ನ ಅಧ್ಯಯನಕ್ಕೆ ಮತ್ತಷ್ಟು ಸ್ಫೂರ್ತಿಯನ್ನೊದಗಿಸಿತು. ಒಟ್ಟಿನಲ್ಲಿ ಈ ವಿಚಾರ ಸಂಕಿರಣವು ಅಧ್ಯಯನದ ಒಟ್ಟು ಹೂರಣವನ್ನು ಹೊರತರುವಲ್ಲಿ ನನಗೆ ಸಹಾಯ ಮಾಡಿತು.

ಈ ರೀತಿಯ ವಿಚಾರಗೋಷ್ಠಿಯ ಪರಿಕಲ್ಪನೆಯಿಂದ ಅಧ್ಯಯನಾರ್ಥಿಗಳ ಉತ್ಸಾಹವನ್ನು ಇಮ್ಮಡಿಗೊಳಿಸುವ ಪ್ರತಿಷ್ಠಾನದ ಕಾರ್ಯ ನಿಜಕ್ಕೂ ಸ್ತುತ್ಯರ್ಹ. ಈ ಕಾರ್ಯಕ್ರಮದ ರೂವಾರಿಗಳಾದ ಪ್ರತಿಷ್ಠಾನದ ಅಧ್ಯಕ್ಷರಾದ ಶ್ರೀನಿವಾಸ ರಾಜು, ಕಾರ್ಯದರ್ಶಿಗಳಾದ ಪ್ರೊ.ನಾ. ಗೀತಾಚಾರ್ಯ ಹಾಗೂ ಪ್ರತಿಷ್ಠಾನದ ಎಲ್ಲ ಸದಸ್ಯರಿಗೂ ನಾನು ಋಣಿಯಾಗಿದ್ದೇನೆ. ಮಾರ್ಗದರ್ಶಕರಾದ ಪ್ರೊ. ಡಿ. ಲಿಂಗಯ್ಯನವರಿಗೆ ನನ್ನ ನಮನಗಳು. ಕಾರ್ಯಕ್ರಮದ ಯಶಸ್ಸಿಗೆ ಕಾರಣರಾದ ನನ್ನ ಸಹ ಅಧ್ಯಯನಾರ್ಥಿಗಳಿಗೆ ನನ್ನ ಕೃತಜ್ಞತೆಗಳು. ಆಸ್ಥೆಯಿಂದ ಉತ್ತಮ ವ್ಯವಸ್ಥೆ ಮಾಡಿದ ಮಿತ್ರ ರವೀಶ ಅವರಿಗೆ ನನ್ನ ವಿಶೇಷ ಕೃತಜ್ಞತೆಗಳು. ಕಾರ್ಯಾಲಯದ ಸಿಬ್ಬಂದಿಗೆ ನನ್ನ ವಂದನೆಗಳು.

❐

## ೭. ಕೆಂಪೇಗೌಡರು 'ಧರ್ಮಪ್ರಭು' ಎಂಬ ಹೆಗ್ಗಳಿಕೆಗೆ ಪಾತ್ರರಾದ ಹಿನ್ನೆಲೆ

■ ಡಾ.ಪಿ.ವಿ. ಕೃಷ್ಣಮೂರ್ತಿ

ಎಲಹಂಕನಾಡ ಪ್ರಭು ಕೆಂಪೇಗೌಡರ ನೈಜ ಇತಿಹಾಸವು ಹಿರಿಯ ಕೆಂಪೇಗೌಡರಿಂದ ಆರಂಭಗೊಂಡು ಇಮ್ಮಡಿ ಕೆಂಪೇಗೌಡ, ಮುಮ್ಮಡಿ ಕೆಂಪೇಗೌಡ, ದೊಡ್ಡವೀರಪ್ಪಗೌಡ, ಮುಮ್ಮಡಿ ಕೆಂಪವೀರಪ್ಪಗೌಡರವರೆಗೆ ವ್ಯಾಪಿಸಿದ್ದು, ಈ ಪ್ರಭುಗಳಿಗೆ ಸಂಬಂಧಿಸಿದಂತೆ ಅನೇಕ ಶಿಲಾ, ತಾಮ್ರಶಾಸನಗಳು, ಶಾಸನದ ನಕಲು ಪತ್ರಗಳು ಹಾಗೂ ಕೆಲವು ಸಾಹಿತ್ಯಕ ಆಕರಗಳು ಲಭ್ಯವಿವೆ. ಸಾಹಿತ್ಯಕ ಆಕರಗಳು ಮುಖ್ಯವಾಗಿ ಇಮ್ಮಡಿ ಕೆಂಪೇಗೌಡ, ಮುಮ್ಮಡಿ ಕೆಂಪೇಗೌಡ ಮತ್ತು ದೊಡ್ಡವೀರಪ್ಪಗೌಡರ ಆಶ್ರಯ ಅಥವಾ ಕಾಲದಲ್ಲಿ ಹುಟ್ಟಿಕೊಂಡಿವೆ. ಈ ಆಕರಗಳ ಹಿನ್ನೆಲೆಯಲ್ಲಿ ಕೆಂಪೇಗೌಡರು ಹೇಗೆ? 'ಧರ್ಮಪ್ರಭುಗಳು' ಎಂಬ ಹೆಗ್ಗಳಿಕೆಗೆ ಪಾತ್ರರಾದರು ಎಂಬುದನ್ನು ಪರಿಶೀಲಿಸುವ ಪ್ರಯತ್ನ ಈ ಪ್ರಬಂಧದ ಉದ್ದೇಶವಾಗಿದೆ.

ವಿಜಯನಗರದ ಕರ್ನಾಟಕಾಧೀಶರ ಕಾಲದಲ್ಲಿ ತಲೆಯೆತ್ತಿದ ಈ ಎಲಹಂಕನಾಡ ಪ್ರಭುಗಳ ವಂಶದಲ್ಲಿ 'ಕೆಂಪ' ಎಂಬ ನಿರ್ದಿಷ್ಟ ಅಂಶವನ್ನು ತಮ್ಮ ಹೆಸರಿನ ಭಾಗವಾಗಿಸಿಕೊಂಡಿದ್ದವರು ಅನೇಕರಿದ್ದಾರೆ. ಉದಾ: ಕೆಂಪನಾಚೇಗೌಡ, ಹಿರಿಯ ಕೆಂಪೇಗೌಡ, ಇಮ್ಮಡಿ ಕೆಂಪೇಗೌಡ, ಮುಮ್ಮಡಿ ಕೆಂಪೇಗೌಡ, ಎರಡನೇ ಇಮ್ಮಡಿ ಕೆಂಪೇಗೌಡ, ಎರಡನೇ ಮುಮ್ಮಡಿ ಕೆಂಪೇಗೌಡ, ಕೆಂಪವೀರಪ್ಪಗೌಡ, ಇತ್ಯಾದಿ. ಈ ಹಿನ್ನೆಲೆಯಲ್ಲಿ, ಈ ವಂಶೀಯರನ್ನೆಲ್ಲಾ 'ಕೆಂಪೇಗೌಡರು' ಎಂಬ ವಿಶಾಲಾರ್ಥದಲ್ಲೆ ಸಂಬೋಧಿಸುವುದು ಪ್ರಚಲಿತವಷ್ಟೆ.

ದಕ್ಷಿಣ ಕರ್ನಾಟಕ ಭಾಗವನ್ನು ಆಳಿದ ಆರಂಭಿಕ ರಾಜರೆಂದರೆ ಗಂಗರಸರು. ಇವರು ತಮ್ಮ ಆಳ್ವಿಕೆಯನ್ನು "ಸಮ್ಯಕ್ ಪ್ರಜಾಪಾಲನ ಮಾತ್ರಾಧಿಗತ ರಾಜ್ಯ ಪ್ರಯೋಜನಸ್ಯ" ಎಂಬಂತೆ ನಡೆಸಿದವರು. ಅಂದರೆ ಜನಪದ ಹಿತವೇ ಗಂಗರಸರ ರಾಜ್ಯಾಡಳಿತದ

ಅಳತೆಗೋಲಾಗಿತ್ತು. ಆ ಪರಂಪರೆಯಲ್ಲೇ, ಆ ಪ್ರದೇಶದಲ್ಲೇ ತಲೆಯೆತ್ತಿದ ನಾಡಪ್ರಭುಗಳಾದ ಕೆಂಪೇಗೌಡರು ಸಹಜವಾಗಿಯೇ ಜನಪರವಾದ ನಿಲುವುಳ್ಳವರಾಗಿದ್ದರು. ಇದಕ್ಕೆ ಮುಖ್ಯ ಕಾರಣ ಅವರು ಕೃಷಿಕ ಪರಂಪರೆಗೆ ಸೇರಿದವರಾಗಿರುವುದು. 'ಕೃಷಿ' ಎಂಬುದು ಒಂದು ಸಾಮೂಹಿಕ ಕ್ರಿಯೆ. ಕೃಷಿ ಕಾರ್ಯಗಳಿಗೆ ಅನೇಕರ ನೆರವು, ಸಹಕಾರ ಅತ್ಯಗತ್ಯ. ಅದು ಗ್ರಾಮ ಜೀವನವನ್ನು ಒಳಗೊಂಡಿತ್ತು. ಅಂದರೆ ಅಲ್ಲಿ ಯಾವುದೇ ಕೆಲಸ ಅಥವಾ ಸೇವೆಗಳು ಪರಸ್ಪರ ಕೊಡು ಕೊಳೆಗಳ ವಿನಿಮಯ ರೀತಿಯದಾಗಿರುತ್ತಿತ್ತು. ಇದರ ಒಂದು ಸಿದ್ಧರೂಪವೇ ಆಯಗಾರ ಪದ್ಧತಿಯಾದ 'ಬಾರಾ ಬಲೂತಿ' ಎನ್ನಬಹುದು. ಈ ಪ್ರಕ್ರಮದ ಶಿಶುವಾದ ಕೆಂಪೇಗೌಡರು ಸಹಜವಾಗಿಯೇ ಸಮಾಜದ ಪ್ರತಿಯೊಬ್ಬರು ಅನಿವಾರ್ಯ ಎಂಬ ಧೋರಣೆಯುಳ್ಳವರಾಗಿದ್ದರು. ಆ ಕಾರಣದಿಂದಲೇ ತಾವು ಪ್ರಭುಗಳಾದಾಗ ತಮ್ಮ ಎಲ್ಲಾ ಪ್ರಜೆಗಳ ಬಗ್ಗೆ ಸಮದೃಷ್ಟಿಯುಳ್ಳವರಾಗಿದ್ದರೆಂದರೆ ತಪ್ಪಾಗಲಾರದು. ಜನರ ನೆರವು, ಸಹಕಾರ, ಸಹಚರ್ಯಗಳ ಅವಲಂಬನವೇ ಮುಖ್ಯವೆಂದು ಭಾವಿಸಿದ್ದ ಈ ವರ್ಗದ ಪ್ರಭುಗಳು ಸಮಾಜದ ಹಿತದ ಕಡೆಗೆ ಹೆಚ್ಚು ಒತ್ತು ಕೊಡಲು ಸಾಧ್ಯವಾಯಿತೆಂದು ತೋರುತ್ತದೆ.

ಎಲಹಂಕನಾಡ ಪ್ರಭು ಕೆಂಪೇಗೌಡ ವಂಶೀಯರು ಮೂಲತಃ ಸಾಮ್ರಾಜ್ಯವೊಂದರ ಸ್ಥಳೀಯ ಆಡಳಿತ ಘಟಕವಾದ ನಾಡಾಳ್ವಿಕೆಗೆ ಸಂಬಂಧಿಸಿದ 'ನಾಡಪ್ರಭು'–'ನಾಳ್ಪ್ರಭು' ಪರಂಪರೆಗೆ ಸೇರಿದವರಾಗಿದ್ದರು. 'ನಾಡಪ್ರಭು' ಎಂಬುವವರು ನಾಡೊಂದರ ನ್ಯಾಯಾಡಳಿತ ಮತ್ತು ಶಾಂತಿಪಾಲನೆ, ಇವುಗಳಿಗಾಗಿ, ಆರಂಭದಲ್ಲಿ ಅಧಿರಾಜರು ಇಲ್ಲವೆ ಮಾಂಡಲಿಕ ಅಥವಾ ಸಾಮಂತರಿಂದ ಗುರುತಿಸಿ ನೇಮಿಸಲಾದ ಒಬ್ಬ ಸ್ಥಳೀಯ ಪ್ರಭು. ಇವರು ಸಾಮಾನ್ಯ ವಾಗಿ ಮೂಲದಲ್ಲಿ ಊರಪ್ರಭುಗಳಾದ ಊರಗೌಡರಲ್ಲೇ ಒಬ್ಬರಾಗಿದ್ದ ಸಾಧ್ಯತೆಗಳಿರುತ್ತವೆ. ಹಲವಾರು ಗ್ರಾಮಗಳಿಗೆ ಒಬ್ಬ ನಾಡಪ್ರಭುವಿನಂತೆ ಹತ್ತಾರು ನಾಡಪ್ರಭುಗಳು ಒಂದು ನಾಡಿಗೆ ಇರುತ್ತಿದ್ದರು. ಆ ಕಾರಣದಿಂದಲೇ ಎಲಹಂಕ ನಾಡಪ್ರಭುಗಳ ಪ್ರಸ್ತಾಪವಿರುವ ಅನೇಕ ಶಾಸನಗಳಲ್ಲಿ ಅದರಲ್ಲೂ ಕ್ರಿ.ಶ. ೧೫೦೦ರ ಒಳಗಿನ ಶಾಸನಗಳಲ್ಲಿ ಮೂರರಿಂದ, ಎಂಟು ಜನ ನಾಡಪ್ರಭು ಅಥವಾ ನಾಡಗಾವುಂಡರ ಉಲ್ಲೇಖಗಳು ಕಂಡುಬರುತ್ತವೆ. ಇವರು ಸ್ಥಳೀಯ ಆಡಳಿತದಲ್ಲಿ ಬಹುಮುಖ್ಯ ಪಾತ್ರವಹಿಸುತ್ತಿದ್ದರೆಂದು ತೋರುತ್ತದೆ. ಇವರು ಸ್ಥಳೀಯ ನ್ಯಾಯಾಡಳಿತ ಮತ್ತು ಶಾಂತಿಪಾಲನೆಯಲ್ಲಿ ಮಾತ್ರವಲ್ಲದೆ ದೇವಾಲಯ, ಮಠ ಇಲ್ಲವೆ ಬ್ರಹ್ಮದೇಯ ಸ್ವರೂಪದ ದಾನದತ್ತಿಗಳನ್ನು ಇವರ ಸಮ್ಮುಖದಲ್ಲೇ ದಾನಿಗಳು ನೀಡುತ್ತಿದ್ದರು. ಮುಖ್ಯವಾಗಿ ಅಧಿರಾಜ ಅಥವಾ ಮಾಂಡಲಿಕ ಮುಂತಾದ ಮೇಲಾಧಿಕಾರಿ ವರ್ಗದವರಿಂದ ನೀಡಲ್ಪಟ್ಟ ದಾನದತ್ತಿಗಳು ಪರಭಾರೆಯಾಗದಂತೆ ರಕ್ಷಿಸುವ ಜವಾಬ್ದಾರಿ ಇವರ ಮೇಲೆ ಇದ್ದಿತು. ಅದಕ್ಕಾಗಿ ಸಣ್ಣ ಪ್ರಮಾಣದ ಸೈನ್ಯದ ನಿರ್ವಹಣೆ ಕೂಡ ಇವರ ಭಾಗವಾಗಿದ್ದಿತು. ಪ್ರಾಯಶಃ ಈ ಕಾರಣದಿಂದಲೇ ಈ ಸ್ತರದ ಪ್ರಭುವರ್ಗದವರು ಹೆಚ್ಚು ಪ್ರಭಾವಿಗಳೂ ಜನಾನುರಾಗಿಗಳೂ ಆಗಿದ್ದರೆಂದು ಹೇಳಬಹುದು. ಆವೊಂದು ಪ್ರಭುಸ್ಥಾನಮಾನ ಪಡೆದಿದ್ದ ವಂಶದವರು ತಾವು ಎಂಬ ಹೆಮ್ಮೆ ಎಲಹಂಕನಾಡ ಪ್ರಭುಗಳೆನಿಸಿದ ಕೆಂಪೇಗೌಡರಲ್ಲೂ ಇದ್ದಿತೆಂಬುದು ನಿಸ್ಸಂಶಯ.

ಈ ಹಿನ್ನೆಲೆಯಲ್ಲಿ ಪ್ರಜೆಗಳಿಗೆ ಸಹಾಯಕರಾಗಿ ಸೇವೆ ಸಲ್ಲಿಸುವುದೇ ತಮ್ಮ ಧರ್ಮವೆಂದು ನಂಬಿಕೊಂಡು ಬಂದಿದ್ದ ಇವರನ್ನು ಧರ್ಮ ಪ್ರಭುಗಳೆಂದು ಪ್ರಜಾವರ್ಗವು ಭಾವಿಸಿದ್ದುದರಲ್ಲಿ ತಪ್ಪೇನು ಕಾಣುವುದಿಲ್ಲ.

ಭಾರತೀಯ ಸಂಸ್ಕೃತಿಯಲ್ಲಿ ಧರ್ಮವೆಂಬುದಕ್ಕೆ ವಿಶಾಲವಾದ ಅರ್ಥವಿದೆ. ಮುಖ್ಯವಾಗಿ ವ್ಯಕ್ತಿಯೋರ್ವನು ಇಹಪರ ಸುಖಕ್ಕಾಗಿ ಮಾಡಬೇಕಾದ ಕೆಲಸಗಳೇ ಧರ್ಮವೆನಿಸುತ್ತದೆ. ನಮ್ಮ ಸಾಹಿತ್ಯ, ಸಂಗೀತ, ನೃತ್ಯ, ಶಿಲ್ಪ ಮೊದಲಾದ ಎಲ್ಲಾ ಕಲೆಗಳಿಗೂ ಧರ್ಮವೇ ಮೂಲ ಪ್ರೇರಣೆ ಹಾಗೂ ವಸ್ತು ಧರ್ಮ ಕಲೆಗಳನ್ನು ಬೆಳೆಸಿತು. ಕಲೆಗಳು ಧರ್ಮವನ್ನು ಬೆಳೆಸಿದವು. ನಾಡಪ್ರಭುಗಳಾದ ಕೆಂಪೇಗೌಡರು ತಮ್ಮ ನಾಡಿನ ಪ್ರಜೆಗಳ ಹಾಗೂ ತಮ್ಮ ಇಹಪರ ಸುಖಕ್ಕಾಗಿ ಸಾಹಿತ್ಯ, ಸಂಗೀತ, ನೃತ್ಯ, ಶಿಲ್ಪ ಮೊದಲಾದ ಎಲ್ಲಾ ಕಲೆಗಳಿಗೂ ಪ್ರೋತ್ಸಾಹ ನೀಡಿರುವುದನ್ನು ಅವರ ಕಾಲದಲ್ಲಿನ ಶಾಸನಗಳು ಬಿಂಬಿಸುತ್ತವೆ. ರಾಜಧರ್ಮದಲ್ಲಿ ದುಷ್ಟನಿಗ್ರಹ ಶಿಷ್ಟ ಪರಿಪಾಲನೆ ಮುಖ್ಯ ಅಂಗ. ಅಂತೆಯೇ 'ಪರಿಪ್ರಾಣಾಯ ಸಾಧೂನಾಂ ವಿನಾಶಾಯಚ ದುಷ್ಕೃತಾಮ್ ಧರ್ಮ ಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ'(ಗೀ. ೪-೮) ಎಂಬಂತೆ ಕೆಂಪೇಗೌಡರು ಅಂದಿನ ಅಗತ್ಯಕ್ಕೆ ಅನುಗುಣವಾಗಿ ತನ್ನ ಪ್ರಜೆಗಳು ನೆಮ್ಮದಿಯಿಂದ ಬಾಳಿ ಬದುಕಲು ಅನುವಾಗುವಂತೆ ಸಾಕಷ್ಟು ಸಾಹಸ ಕಾರ್ಯಗಳನ್ನು ಕೈಗೊಂಡು ತಮ್ಮ ಶೌರ್ಯ ಪ್ರತಾಪಗಳನ್ನು ಮೆರೆದಿರುವ ಸಂಗತಿಯನ್ನು ಅವರ ಕಾಲದಲ್ಲಿ ಹುಟ್ಟಿಕೊಂಡು ಸಾಹಿತ್ಯ ಕೃತಿಗಳು ಪಡಿಮೂಡಿಸಿವೆ. ಅಂತೆಯೆ ಪ್ರಸ್ತುತ ಅಧ್ಯಯನದಲ್ಲಿ ಈ ಪ್ರಭುಗಳ ಬಗ್ಗೆ ಮುಖ್ಯವಾಗಿ ಸಾಹಿತ್ಯಕ ಕೃತಿಗಳಲ್ಲಿ ವ್ಯಕ್ತವಾಗಿರುವ ಸಂಗತಿಗಳನ್ನು ಸಂಗ್ರಹಿಸಿಕೊಟ್ಟು ವ್ಯಾಖ್ಯಾನಿಸಲು ಪ್ರಯತ್ನಿಸಿರುತ್ತೇನೆ.

ಮುಮ್ಮಡಿ ಕೆಂಪೇಗೌಡನ ಆಸ್ಥಾನ ಕವಿಯಾಗಿದ್ದ ಏಕಾಂಬರ ದೀಕ್ಷಿತನು ಎಲಹಂಕ ವಂಶದ ರಾಜರನ್ನು ಕುರಿತು 'ತನಗೆ ಶರಣಾದವರನ್ನು, ಆಶ್ರಿತರನ್ನು ರಕ್ಷಿಸುತ್ತಾ, ತ್ರಿಪುರಹರನಾದ ಆ ಶಿವನ ಪಾದವನ್ನು ಪೂಜಿಸುತ್ತಾ ಕವೀಂದ್ರರ ಕಲ್ಪವೃಕ್ಷದಂತೆ, ತನ್ನ ಬಾಹುಬಲದಿಂದ ಶತ್ರುಗಳನ್ನು ಸೋಲಿಸುತ್ತಾ ತದೇಕಚಿತ್ತದಿಂದ ಧರ್ಮಶಾಸ್ತ್ರಗಳನ್ನು ಕೇಳುತ್ತಾ ನಿರಂತರವಾಗಿ ಸರ್ವ ಸಾಮ್ರಾಜ್ಯ ಲಕ್ಷ್ಮಿಯನ್ನು ರಕ್ಷಿಸುತ್ತಾ ಆನಂದದಿಂದ ರಾಜ್ಯವಾಳುತ್ತಿದ್ದರು' ಎಂದು ಒಟ್ಟಾರೆಯಾಗಿ ವರ್ಣಿಸಿದ್ದಾನೆ. ಅವರಲ್ಲಿ ಹಿರಿಯ ಕೆಂಪೇಗೌಡನು 'ಅಮಿತ ಮಹಿಮೆ ಯುಳ್ಳವನೂ ಕೀರ್ತಿ ಪ್ರತಾಪಗಳಿಂದ ಜನಪ್ರಿನಾಗಿದ್ದು ಶ್ರೇಷ್ಠಗುಣಗಳಿಂದ ಕೂಡಿದ್ದನೆಂದೂ. ಆತನಿಗೆ ಎಲ್ಲಾ ವಿಷಯಗಳಲ್ಲೂ ಅಭಿರುಚಿ ಇದ್ದಿತೆಂದೂ, ಆತನಯಶೋಮಂಜರಿಯು ಕರ್ಣಾಟಕ, ದ್ರಾವಿಡ ಮತ್ತು ಆಂಧ್ರ ವನಿತೆಯರ ಕರ್ಣಪೂರದಂತೆ ಸುಶೋಧಿತವಾಗಿತ್ತೆಂದು. ಈತನು ತನ್ನ ಬಾಹುಬಲದಿಂದ ಅನೇಕ ಶತ್ರುರಾಜರನ್ನು ಗೆದ್ದು. ದುಷ್ಟರ ಕೈಯಲ್ಲಿ ಸೊರಗಿದ್ದ ಪ್ರಜೆಗಳ ಕಣ್ಣೀರನ್ನು ಹೋಗಲಾಡಿಸಿ ಅವರನ್ನು ಕರುಣೆಯಿಂದ ರಕ್ಷಿಸಲೆಂದೇ ಖಡ್ಗವನ್ನು ಧರಿಸಿದ್ದನೆಂದು' ವೀರಭದ್ರ ವಿಜಯ ಕಾವ್ಯದಲ್ಲಿ ಬಣ್ಣಿತನಾಗಿದ್ದಾನೆ. ಈ ವಿವರಣೆ ಹಿರಿಯ ಕೆಂಪೇಗೌಡನು ಅಧಿಕಾರಕ್ಕೆ ಬರುವ ವೇಳೆಗೆ ಪ್ರಜಾಹಿಂಸಕರಾದ ಶತ್ರುಗಳಿಂದ ಜನರು ಕಣ್ಣೀರು ಸುರಿಸುತ್ತಿದ್ದರೆಂಬುದು ಖಚಿತವಾಗುತ್ತದೆ. ಅಂತಹ ಒಂದು ಸನ್ನಿವೇಶದಲ್ಲಿ ಈ

ಹಿರಿಯ ಕೆಂಪೇಗೌಡನು ರಾಜ್ಯಾಧಿಕಾರವನ್ನು ಕೈಗೆತ್ತಿಕೊಂಡು ಶತ್ರುಗಳನ್ನು ಗದ್ದು ಜನರಿಗೆ ನೆಮ್ಮದಿಯನ್ನು ನೀಡಿದನೆಂಬ ವಿವರದೊಂದಿಗೆ ಆತನ ಕೀರ್ತಿ ಕರ್ನಾಟಕದಷ್ಟೇ ಅಲ್ಲ ಆಂಧ್ರ, ದ್ರಾವಿಡ ದೇಶಗಳಲ್ಲೂ ಜನ ಜನಿತವಾಗಿದ್ದ ಸಂಗತಿಯನ್ನು ತಿಳಿಸುತ್ತದೆ.

ಹಿರಿಯ ಕೆಂಪೇಗೌಡನಿಗೆ ಸಂಬಂಧಿಸಿದ ಶಾಸನವೊಂದು ಬೆಂಗಳೂರು ಜಿಲ್ಲೆ ಉತ್ತರ ತಾಲೂಕಿನ ದಾಸರಹಳ್ಳಿ ಗ್ರಾಮದ ಚೌಡೇಶ್ವರಿ ದೇವಾಲಯದಲ್ಲಿದ್ದು ಕ್ರಿ.ಶ. ೧೫೩೧ರಲ್ಲಿ ವಿಜಯನಗರದ ಅಚ್ಯುತದೇವರಾಯರು ಕೆಂಪಯ್ಯದೇವರಸನ ನಾಯಕತನಕ್ಕೆ ಎಲಹಂಕರಾಜ್ಯವನ್ನು ವಹಿಸಿಕೊಟ್ಟಿರುವ ವಿವರವನ್ನು ದಾಖಲಿಸಿದೆ. ಕ್ರಿ.ಶ.೧೫೬೬ ರ ಕುಣಿಗಲ್ ನರಸಿಂಹಸ್ವಾಮಿ ದೇವಾಲಯದಲ್ಲಿರುವ ಶಾಸನವು ಕಸಪನಾಯಕ, ಚಿಕ್ಕ ಲಿಂಗ, ಹಿರಿಯಲಿಂಗ ಎಂಬುವರು ತಮಗೂ ತಮ್ಮರಸ ಕೆಂಪಯಗೌಡರಿಗೂ ಧರ್ಮವಾಗಲೆಂದು ಉಲ್ಲೇಖಿಸಿದೆ. ಕ್ರಿ.ಶ.೧೫೭೭ರ ಮಾಸ್ತಿ ತಾಮ್ರ ಪಟಗಳಲ್ಲಿ ಎಲಹಂಕನಾಡ ಪ್ರಭು ಹಿರಿಯ ಕೆಂಪೇಗೌಡ ವರತೂರು, ಸುರಹುಣಿಸಿ, ಹಾರುವಹಳ್ಳಿ ಗ್ರಾಮಗಳನ್ನು ತಿರುಮಲಯ್ಯನೆಂಬ ಶ್ರೀವೈಷ್ಣವ ಪುತ್ರನಿಗೆ ಶಿವಗಂಗೆಯ ಗಂಗಾಧರೇಶ್ವರ ಸನ್ನಿಧಿಯಲ್ಲಿ ದಾನ ನೀಡಿರುವ ವಿವರ ಬಂದಿದೆ. ಶಿವಗಂಗೆಯ ಗಂಟೆಯೊಂದರ ಮೇಲಿರುವ ಶಾಸನವು ಕ್ರಿ.ಶ. ೧೫೮೮ಕ್ಕೆ ಸೇರಿದ್ದು ತನಗೆ ವಂಶಾಭಿವೃದ್ಧಿಯನ್ನು ಬಯಸಿರುವುದನ್ನು ತಿಳಿಸುತ್ತದೆ.

ಕ್ರಿ.ಶ. ೧೬೦೮ರ ಶಿವಗಂಗೆಯ ಗಂಗಾಧರೇಶ್ವರ ದೇವಾಲಯದ ವಿಗ್ರಹದ ಮೇಲಿರುವ ಶಾಸನವು ಬೆಂಗಳೂರು ಕೆಂಪನಾಚಯಗೌಡರ ಕುಮಾರ ಕೆಂಪಯಗೌಡನು ಗಂಗಾಧರಸ್ವಾಮಿಯ ಪಾದಕ್ಕೆ ಸದಾನಮಸ್ಕಾರ ಎಂದು ಉಲ್ಲೇಖಿಸುತ್ತದೆ. ಪ್ರಾಯಶಃ ಈ ಶಾಸನದ ಕಾಲಕ್ಕಾಗಲೇ ಹಿರಿಯ ಕೆಂಪೇಗೌಡನು ಶಿವೈಕ್ಯನಾಗಿರಬೇಕು. ಅನಂತರದಲ್ಲಿ ಆತನ ಗೌರವಾರ್ಥ ಆತನ ವಿಗ್ರಹ ಮತ್ತು ಈ ಶಾಸನಗಳು ರಚನೆಯಾಗಿರುವಂತಿದೆ. ಕ್ರಿ.ಶ. ೧೫೮೮ರ ಅನಂತರದಲ್ಲಿ ಅಂದರೆ ಕ್ರಿ.ಶ.೧೫೯೫ರಲ್ಲಿ ಕುಣಿಗಲ್ ಪ್ರದೇಶದಲ್ಲಿ ಇಮ್ಮಡಿ ಹಿರೀ ಕೆಂಪೇಗೌಡನ ಶಾಸನಗಳಿವೆ. ಅವು ಆತನ ಪುಟ್ಬಾಜೀ ವೆಂಕಟಕೃಷ್ಣಾಜಮ್ಮ, ಪಟದ ನಾಟಕ ಶಾಲೆಯ ಶೃಂಗಾರಮ್ಮ ಎಂಬುವರನ್ನು ಪ್ರಸ್ತಾಪಿಸುತ್ತಿದ್ದು ಅವು ಕ್ರಮವಾಗಿ ಕೃಷ್ಣಸಾಗರ, ಶೃಂಗಾರಸಾಗರ ಎಂಬುವ ಕೆರೆ ಮತ್ತು ಅಗ್ರಹಾರಗಳನ್ನು ಸ್ಥಾಪಿಸಿ ವಿಪ್ರರಿಗೆ ದತ್ತಿ ನೀಡಿರುವುದನ್ನು ಕಾಣಬಹುದು. (ಇಲ್ಲಿ ಉಕ್ತವಾಗಿರುವ ಇಮ್ಮಡಿ ಹಿರಿಯ ಕೆಂಪೇಗೌಡ ಎಂಬುವನು ವಾಸ್ತವವಾಗಿ ಇಮ್ಮಡಿ ಕೆಂಪೇಗೌಡನಿಗೆ ಲಿಂಗಮ್ಮನೆಂಬ ಪತ್ನಿಯಲ್ಲಿ ಹುಟ್ಟಿದವನಾಗಿದ್ದು ವೀರಭದ್ರವಿಜಯವು ಈತನನ್ನು ಒಬ್ಬ ಪ್ರಸಿದ್ಧ ಕವಿಯೆಂದು ವರ್ಣಿಸಿದೆ.) ಅಂದರೆ ಈ ಶಾಸನಗಳ ಕಾಲ ಕ್ರಿ.ಶ. ೧೬೫೯ ಆಗಿರುವ ಸಾಧ್ಯತೆಗಳಿವೆ).

ಹಿರಿಯ ಕೆಂಪೇಗೌಡನ ಕಾಲಕ್ಕೆ ಸೇರಿದ ಮೇಲಿನ ಶಾಸನಗಳ ಅವಲೋಕನದಿಂದ ಆತನು ಕ್ರಿ.ಶ. ೧೫೩೧ ರಿಂದ ವಿಜಯನಗರ ಅರಸರ ಅಧಿಕೃತ ನಾಯಕನಾಗಿ ಮಾಗಡಿ, ಕುಣಿಗಲ್ ಪ್ರದೇಶಗಳೂ ಒಳಗೊಂಡಂಥ ಎಲಹಂಕರಾದ್ಯಕ್ಕೆ ನೇಮಗೊಂಡ ಸಂಗತಿ ಖಚಿತಪಡುತ್ತದೆ. ಈತನ ರಾಜ್ಯ ಹಿಂದಿನ ಎಲಹಂಕನಾಡು ಪ್ರದೇಶವನ್ನು ಒಳಗೊಂಡಂತೆ ಇಂದಿನ ಬೆಂಗಳೂರು ಜಿಲ್ಲೆಯ ಪೂರ್ವ ಭಾಗಗಳು, ಮೇಲೆ ಉಲ್ಲೇಖಿಸಿದ ಮಾಗಡಿ,

ನೆಲಮಂಗಲ, ಕುಣಿಗಲ್ ಪ್ರದೇಶಗಳು ಸೇರಿದಂತೆ ವಿಸ್ತಾರವಾಗಿತ್ತು. ಅನೇಕ ದೇವಾಲಯಗಳಿಗೆ, ಬ್ರಾಹ್ಮಣರಿಗೆ ವಿಪುಲ ಭೂಮಿ-ಗ್ರಾಮಗಳನ್ನು ಉದಾರವಾಗಿ ನೀಡಿರುವುದನ್ನು ಅರಿಯಬಹುದಾಗಿದೆ. ಒಟ್ಟಾರೆ ಈ ಅರಸರ ಜನಪರ ನಿಲುವು, ಧಾರ್ಮಿಕ ಪ್ರವೃತ್ತಿಗಳೇ ಪ್ರಧಾನವಾಗಿರುವುದನ್ನು ಶಾಸನಗಳು ದಾಖಲಿಸಿವೆ.

ಎಲಹಂಕನಾಡ ಪ್ರಭುಗಳಲ್ಲಿ ಬಹಳ ಪ್ರಸಿದ್ಧನಾದವನೆಂದರೆ ಇಮ್ಮಡಿ ಕೆಂಪೇಗೌಡ. ಈತನ ಕೀರ್ತಿ ಪ್ರತಾಪಗಳನ್ನು ಕೆಂಪೇಗೌಡ ಜಯಪ್ರಶಸ್ತಿ, ಯಶಃ ಪ್ರತಾಪ ಕೀರ್ತನೆಗಳು* ಈ ಕೃತಿಗಳ ಕರ್ತೃ 'ಹೊನ್ನಕವಿ' ಎಂದು ಡಾ॥ ಬಿ. ನಂಜುಂಡಸ್ವಾಮಿಯವರು ತಮ್ಮ ಒಂದು ಲೇಖನದಲ್ಲಿ ಪ್ರತಿಪಾದಿಸಿದ್ದಾರೆ ಹಾಗೂ ವೀರಭದ್ರ ವಿಜಯ ಕಾವ್ಯಗಳು ವಿಸ್ತೃತವಾಗಿ ವರ್ಣಿಸಿವೆ.

'ಹುಣ್ಣಿಮೆಯ ಚಂದ್ರನೊಲು ಶಾಂತಿಕರ, ಸತತಗುಣಸಿಂಧು, ಆಶ್ರಿತಜನಾಧಾರ, ಬಸವೇಶನಿವ, ರಣಧನಂಜಯ, ಧುರಧೀರ, ಅಗಣಿತಗುಣಾಶ್ರಯ' ಎಂದು ವಿಧವಿಧವಾಗಿ ಇಮ್ಮಡಿ ಕೆಂಪೇಗೌಡನನ್ನು ಜಯಪ್ರಶಸ್ತಿ ಬಣ್ಣಿಸುವುದರೊಂದಿಗೆ ಸ್ವಾಮಿದ್ರೋಹರಗಂಡ, ಸಂಗ್ರಾಮಧೀರನೇ, ಕದನಕರಚೌಪಟಮಲ್ಲ, ಆಹವೋದ್ದಂಡನೇ ಸಂಗರ ಶೂರನೇ, ಅರಿವಕ್ರದಂಡ, ಪರಬಲಾಂತಕ, ಭೀಮ-ಬಾಹು-ಬಲರಾಮ, ಸಂಗ್ರಾಮಭೀಮ, ದಿಗ್ವಿಜಯ ಸುತ್ರಾಮ, ವೈರಿಗಂಡ-ಮಾರ್ತಾಂಡ, ರಣಹಮ್ಮೀರಾ ವೀರತ್ವವನ್ನು ವರ್ಣಿಸುವುದರೊಂದಿಗೆ ಸಮುದ್ರದಂತೆ ಗಂಭೀರನೆ, ಸೂರ್ಯನಂತೆ ಘನತೇಜಸ್ವಿಯೇ, ಸತ್ಕೀರ್ತಿಕರಂಡನೆ, ಪ್ರಭುಕುಲಶಿರೋಮಣಿ, ನವ ಕಬ್ಬುವಿಲ್ಲಾ, ವನದಿಗಂಭೀರನೆ, ಮೋಹನ ಮೇರು ಧೀರನೆ, ಪುಷ್ಪಕೋದಂಡನೇ, ನೇಮಗಾರನೆ, ದೊರೆಗಳ ಶಿರೋರತ್ನ, ಸುಗುಣಮೋಹನ ಎಂಬಿವೇ ಮುಂತಾದ ಜಯಪ್ರಶಸ್ತಿಯ ವರ್ಣನೆಗಳು ಆತನ ಧೀರ ಗಂಭೀರ ನಿಲುವನ್ನು ಬಿಂಬಿಸಿವೆ. ಈ ಕೃತಿಯ ಮೊದಲನೇ ಭಾಗವು ಕ್ರಿ.ಶ.೧೬೧೨ ರಲ್ಲಿ ನೆರೆಯ ಹೊಸಕೋಟೆಯ ಪಾಳೆಯಗಾರನಾದ ಸುಗುಟೂರು ಮುಮ್ಮಡಿ ತಮ್ಮಗೌಡನಿಗೆ ಪುನಃ ಅವನ ರಾಜ್ಯವನ್ನು ದೊರಕಿಸಿಕೊಟ್ಟ ಸಂಗತಿಯನ್ನು ವರ್ಣಿಸಿದರೆ, ಎರಡನೆಯ ಭಾಗವು ಕ್ರಿ.ಶ. ೧೬೩೫ರಲ್ಲಿ ವಿಜಯನಗರದ ಅರಸು ಮುಮ್ಮಡಿ ವೆಂಕಟಪತಿರಾಯನಿಗೆ ಪೆನುಗೊಂಡೆಯ ಸಿಂಹಾಸನವನ್ನು ದೃಢಪಡಿಸಿಕೊಡುವುದಕ್ಕಾಗಿ ನಡೆಸಿದ ಹೋರಾಟದ ವರ್ಣನೆ ಬಂದಿದೆ. ಜೊತೆಗೆ ವೆಂಕಟಪತಿರಾಯನ ಕೋರಿಕೆಯ ಮೇರೆಗೆ ಅವಿಧೇಯರಾಗಿದ್ದ ವಸಂತನ ಸೀಮೆ, ಮಲೆಯ ಹಂಪನ ಸೀಮೆ, ಹಂಡೆಯ ಹಂಪರಾಜ, ವೂಟಕೂರಪಾಳೆಯ, ಬಿಜ್ಜಾವರದ ಸೀಮೆ, ರಣಭೈರವನ ಸೀಮೆ, ಹೊಸವೂರು, ಕುಂದರಿಪೆ ತಿಮ್ಮೇಂದ್ರ ಮುಂತಾದವರ ಪುಂಡಾಟವನ್ನು ಬಗ್ಗುಬಡಿದು ಅವರಿಂದ ಕಪ್ಪವನ್ನು ತರಸಿ, ರಾಜ್ಯವನ್ನು ಬಿಡಿಸಿದನು ಎಂಬ ವಿವರಗಳು ಬಂದಿವೆ.

ಇನ್ನು ಯಶಃ ಪ್ರತಾಪ ಕೀರ್ತನೆಗಳು – ಈತನನ್ನು ಕುರಿತು 'ಪೊಗಳುತಿದೆ ಜಗವೆಲ್ಲ ಸುಗುಣ ಇಮ್ಮಡಿ ಕೆಂಪನಗಣಿತ ಗುಣಾಶ್ರಯನ ಬಗೆಬಗೆಯೊಳಿಣಿಸಿ ಪೊಗಳುತಿದೆ' ಎಂದು

* 'ನೋಡಿ: ಸರ್ಪಭೂಷಣ ಶ್ರೀ ದ್ವಿ ಶತಮಾನೋತ್ಸವ ಸಂಸ್ಮರಣ ಸಂಪುಟ (೧೯೯೫. ಪುಟ. ೫೯)

ಹೇಳಿ ಅವನ ಸಮಕಾಲೀನ ಪ್ರಸಿದ್ಧ ಸ್ಥಳಗಳಾದ ತಲಕಾಡು, ನಂದಿ, ಶ್ರೀರಂಗಂ, ಮೈಸೂರು, ಹೊಳೇನರಸೀಪುರ, ಮಳವಳ್ಳಿ, ಮದ್ದೂರು, ಚನ್ನಪಟ್ಟಣ, ಕೋಳಾಲ, ಹೊಸಕೋಟೆ, ಗಜಾಶಿಲಾಪುರ(ಆರ್ನಕಲ್), ಶಿವಗಂಗೆ, ಕುಣಿಗಲ್, ಗೂಳೂರು, ಪೆನುಗೊಂಡೆ, ಬಳ್ಳಾಪುರ, ಕಾಶಿ, ಕೇದಾರ, ದಿಳ್ಳಿ, ಅಹ್ಮದನಗರ, ಆಗ್ರ, ಪುರಾನುಪುರ, ಬಂಕಾಪುರ ಇತ್ಯಾದಿ ಸ್ಥಳ, ದೇಶ ವಿದೇಶಗಳಲ್ಲಿ **ಬಸವೇಶ**ನಿವನೆಂದು ಪೊಗಳುತಿದೆ' ಎಂದು ವರ್ಣಿಸಿದೆ.

ಈ ಕೀರ್ತನೆಗಳಲ್ಲೂ 'ರಣಧನಂಜಯ' ಎಂದು ಹೊಗಳಿ ಇಳೆಗೆ ನೀನೇ ಮಹಾಪರಾಕ್ರಮಿ ಎಲಹಂಕನಾಡ ಪ್ರಭುವಲಾ/ಇಮ್ಮಡಿ ಕೆಂಪ ಸಾರ್ವಭೌಮ/ತೆಗೆ ನೀನೇ ಮಹಾ ಪರಾಕ್ರಮಿ ಎಂದು ಹೇಳಿ ಜಗದೇವರಾಯನ ಗರ್ವವನ್ನು ಅಡಗಿಸಿದ ವಿವರಗಳೊಂದಿಗೆ ಹಲಸೂರಿನ ಸೋಮೇಶ್ವರ, ಬೆಂಗಳೂರು ಪಟ್ಟಣ ಇವುಗಳ ಪ್ರಸ್ತಾಪಗಳು ಉಕ್ತವಾಗಿವೆ.

ರಾಜರೆಲ್ಲರ ಮಧ್ಯೆದಲ್ಲಿ ಕಿರೀಟದ ಮಣಿಯಂತೆ ಕಂಗೊಳಿಸುತ್ತಿದ್ದ ಇವನು ಪರೀಕ್ಷಿಸಲಾಗಿದ್ದ ಸ್ಪರ್ಷಮಣಿಯಾದ ಚಂದ್ರನಂತೆ ಸುಶೋಭಿಸುತ್ತಿದ್ದನು. ವಿರೋಧಿರಾಜರುಗಳ ಮೇಲೆ ದರ್ಪವನ್ನು ತೋರಿಸುತ್ತಿದ್ದ ಇವನು ಭೂಮಿಯಲ್ಲಿ ಜನಿಸಿದ ದೇವೇಂದ್ರನೇ ಈತನೆಂದು ಹೇಳಿ ಶ್ರೀರಂಗರಾಯನ ಚತುರಂಗಬಲಾಂಬು ರಾಶಿಯನ್ನು ತನ್ನ ಬಹುಬಲವೆಂಬ ಮಂಥರ ಪರ್ವತದಿಂದ ಕಡೆದು ಅಲ್ಲೋಲ ಕಲ್ಲೋಲಗೊಳಿಸಿದವನೂ–ಶ್ರೀರಂಗರಾಯನ ಗಜ, ತುರುಗ ಸಮೂಹಗಳನ್ನು ಸೆರೆ ಹಿಡಿದುಕೊಂಡನೆಂದು ಪ್ರಶಂಸೆಗೊಳಗಾದ ಇವನು ನಿಜವಾಗಿಯೂ ದೇವೇಂದ್ರನೇ ಆಗಿದ್ದಾನೆ ಎಂದು ಮುಂತಾಗಿ ಈತನ ಗುಣಾತಿಶಯಗಳು ವೀರಭದ್ರ ವಿಜಯದಲ್ಲಿ ಬಣ್ಣಿಸಲ್ಪಟ್ಟಿವೆ.

ಈತನ ಆಳ್ವಿಕೆಗೆ ಸೇರಿದ ಶಾಸನಗಳು ಕ್ರಿ.ಶ. ೧೫೯೭ ರಿಂದ ೧೬೩೩ರವರೆಗೂ ಲಭ್ಯವಿದ್ದು, ಬೆಂಗಳೂರು, ಮಾಗಡಿ, ಕೆಂಪಾಪುರ ಅಗ್ರಹಾರ, ಕಲ್ಯ ಗುಮ್ಮಳಾಪುರ ಮುಂತಾದ ಸ್ಥಳಗಳಲ್ಲಿ ಲಭ್ಯವಾಗಿದ್ದು, ಬೆಂಗಳೂರಿನ ಪೌರೋಹಿತ್ಯದ ಹಕ್ಕು, ಮಾಗಡಿ ಸೋಮೇಶ್ವರ ದೇವಾಲಯಕ್ಕೆ ಪೂಜಾಕೈಂಕರ್ಯಗಳಿಗಾಗಿ ಗ್ರಾಮಗಳ ದತ್ತಿ, ಕೆಂಪಾಪುರ, ಅಯವರ ಕಂಡಪುರ ಅಗ್ರಹಾರಗಳ ದತ್ತಿ, ಬಳ್ಳಾಪುರಪೇಟೆ ರಂಗನಾಥಸ್ವಾಮಿ ದೇವರ ಸೇವೆಗೆ ಶೆಟ್ಟಿ ವರ್ತಕರಿಂದ ದತ್ತಿ, ಕಲ್ಯ, ಮಾಡಬಾಳು, ಹರತಿ, ಮಾಗಡಿ ಸ್ಥಳಗಳ ಪೌರೋಹಿತ್ಯ ಹಕ್ಕು, ಮಠ ಧರ್ಮಶಾಲೆಗಳ ಸ್ಥಾಪನೆ, ಗುಮ್ಮಳಾಪುರದ ಸಿಂಹಾಸನಕ್ಕೆ ಕರ್ತರಾದ ನಂಜೇದೇವರು ಅಯ್ಯನವರ ಪೌತ್ರರಾದ ನಂಜೇದೇವಪ್ಪ ಅಯ್ಯನವರಿಗೆ ಗ್ರಾಮಗಳ ದಾನ ಇತ್ಯಾದಿ ವಿಷಯಗಳಿಗೆ ಸಂಬಂಧಿಸಿದಂತೆ ಇವೆ. ಇಮ್ಮಡಿ ಕೆಂಪೇಗೌಡನ ಬಗೆಗಿನ ವಿಪುಲ ಸಾಹಿತ್ಯಕ ಮತ್ತು ಶಾಸನಗಳ ವಿವರಗಳು ಆತನ ಧಾರ್ಮಿಕ ನಿಷ್ಠೆಯನ್ನು ಮಾತ್ರವಲ್ಲದೆ, ಆತನ ಶೌರ್ಯ, ಪ್ರತಾಪಗಳೊಂದಿಗೆ ಜನಪರವೂ ಜನಪ್ರಿಯವೂ ಆದ ಅನೇಕ ಕಾರ್ಯಗಳಲ್ಲಿ ಆತನು ತೊಡಗಿಕೊಂಡು 'ಧರ್ಮಪ್ರಭು' ಎಂಬ ಹೆಸರಿಗೆ ಯೋಗ್ಯನೆನಿಸಿದ್ದನೆಂದರೆ ಅತಿಶಯೋಕ್ತಿಯಲ್ಲ. ಈತನ ಆಳ್ವಿಕೆಯ ಕಾಲದಲ್ಲಿ ಬೆಂಗಳೂರು ಸಮೃದ್ಧವಾಗಿ ಬೆಳೆಯಿತು. ದೇಶಪಿದೇಶಗಳಲ್ಲೆಲ್ಲಾ ಹೆಸರಾಯಿತು. ಕ್ರಿ.ಶ. ೧೬೩೮ರಲ್ಲಿ ರಣದುಲ್ಲಾಖಾನನ ಆಕ್ರಮಣಕ್ಕೂ ಈತನ ರಾಜ್ಯ ಒಳಗಾಗಿ ಈತ ಬೆಂಗಳೂರನ್ನು ತೊರೆದು ಮಾಗಡಿ ಸಾವನದುರ್ಗಗಳಲ್ಲಿ ಅನಂತರದಲ್ಲಿ ನೆಲೆಗೊಂಡನು. ಆದರೆ ಮುಂದೆ ಕ್ರಿ.ಶ. ೧೬೫೬ರವರೆಗೂ ಈ ವಂಶೀಯರ ಬಗ್ಗೆ ತಿಳಿಯುವುದಿಲ್ಲ. ಮುಂದೆ ಅಂದರೆ

ಕ್ರಿ.ಶ. ೧೬೫೮ರಿಂದಾಚೆಗೆ ಈತನ ಮಗನಾದ ಮುಮ್ಮಡಿ ಕೆಂಪೇಗೌಡನ ಆಡಳಿತ ಮಾಗಡಿ ಸಾವನದುರ್ಗಗಳಲ್ಲಿ ಆರಂಭಗೊಂಡಿದ್ದನ್ನು ಶಾಸನಗಳು ಸಾರುತ್ತವೆ.

ಮುಮ್ಮಡಿ ಕೆಂಪೇಗೌಡನನ್ನು ವೀರಭದ್ರ ವಿಜಯ ಕಾವ್ಯವು ವಿಶಿಷ್ಟವಾಗಿ ವರ್ಣಿಸಿದೆ.

'ಜನ್ಮತಃ ಪ್ರತಾಪಶಾಲಿ, ಯಾರ ಆಜ್ಞೆಯನ್ನು ಸಕಲ ಸಾಮಂತರಾಜರು ಶಿರಸಾವಹಿಸಿ ನಡೆಯುತ್ತಿದ್ದರೋ, ಯಾರ ಮಾತನ್ನು ವಿದ್ವಾಂಸರು ಬ್ರಹ್ಮಲಿಖಿತವೆಂದು ಬಾವಿಸಿದ್ದರೋ, ಯಾರದೃಷ್ಟಿಯು ಪರಾಂಗನೆಯರಿಂದಲೂ ಸಪತಿತೆಯರಿಂದಲೂ ದೂರವಾಗುತ್ತಿತ್ತೊ ಅಂಥ ಮುಮ್ಮಡಿ ಕೆಂಪೇಗೌಡನ ಹೊರತು ಬೇರೆ ಯಾರು ಧನ್ಯರು ಈ ಭೂಮಿಯ ಮೇಲೆ' ಎಂದು ಬಣ್ಣಿಸಿ ಆತ ಷಹಜಿಯ ಸೈನ್ಯವನ್ನು ೬–೭ ಬಾರಿ ಸೆಣಸಿ ಕೊನೆಗೆ ಯುದ್ಧದಲ್ಲಿ ಅವನ ಧ್ವಜ, ಛತ್ರಿ ಮತ್ತು ಆನೆಗಳನ್ನು ಹಿಡಿದುಕೊಂಡ ವಿಷಯ ಹಾಗೇ ದುಸ್ಸಾಧ್ಯವೆನ್ನಿಸಿದ್ದ ಮೈಸೂರಿನ ಕಂಠೀರವ ನರಸರಾಜನ ಸೈನ್ಯಕ್ಕೆ ಬಿರುಗಾಳಿಯಂತೆ ನುಗ್ಗಿ ಕುಠಾರ ಪ್ರಾಯನಾಗಿ ಭೂಮಿಯನ್ನು ಗೆದ್ದದನ್ನು ವೀರಭದ್ರವಿಜಯ ಕಾವ್ಯವು ದಾಖಲಿಸಿದೆ. ಕವಿಯು ಈತನನ್ನು ಸುಬ್ರಹ್ಮಣ್ಯಶಕ್ತಿಯನ್ನು ಹೊಂದಿರುವವನೆಂದೂ ಪ್ರತ್ಯಕ್ಷ ವೀರಭದ್ರನೆ ಆಗಿದ್ದು ಅರ್ಜುನನಂತೆ ಶ್ರೇಷ್ಠನಾಗಿ ಜನರಿಗೆ ಜೀವನಾಧಾರವಾಗಿದ್ದನು, ಅಲ್ಲದೆ ಮಹಾ ಗಾಂಭೀರ್ಯಕ್ಕೆ ಆಶ್ರಯದಾತನಾಗಿದ್ದನೆಂದು ಮುಕ್ತವಾಗಿ ವರ್ಣಿಸಿದ್ದಾನೆ. ಹಾಗೇ ಈ ಮುಮ್ಮಡಿ ಕೆಂಪೇಗೌಡನಿಗೆ ಹಲಸ ಮತ್ತು ಇಮ್ಮಡಿ ಹಿರಿಯ ಕೆಂಪೇಗೌಡರೆಂಬ ಸೋದರರಿದ್ದರು. ಅವರನ್ನು ಕುರಿತು ಕೂಡ ವೀರಭದ್ರ ವಿಜಯವು ವರ್ಣಿಸುತ್ತದೆ. ಇವರಲ್ಲಿ ಹಲಸನು ಯಶಸ್ಸು ಮತ್ತು ಲಲಿತಾಕಾರಗಳೊಂದಿಗೆ ಜನಿಸಿದವನು. ಕರುಣೆಯ ಸರೋವರ ಮತ್ತು ಔದಾರ್ಯದ ಸಮುದ್ರಗಳು ಆತನ ಕಾಂತೆಯರಂತ್ತಿದ್ದವು ಎಂದು ವರ್ಣಿತನಾಗಿದ್ದಾನೆ. ಹಾಗೇ ಇನ್ನೋರ್ವ ಸೋದರನಾದ ಇಮ್ಮಡಿ ಹಿರಿಯ ಕೆಂಪನು ಅತಿಪರಾಕ್ರಮವುಳ್ಳ ಬಾಹುಗಳು ಶತ್ರುಗಳೆಂಬ ಗಂಧಹಸ್ತಿಗಳ ನೆತ್ತಿಗೆ ಅಂಕುಶದಂತಿದ್ದ ಇವನ ಪರಾಕ್ರಮದಿಂದ ವೀರರ ಭೂಮಿಯಾಗುತ್ತಿತ್ತು. ಇವನು ಬಹುಭಾಷಾ ಪಂಡಿತನಾಗಿದ್ದು ಅನೇಕ ಭಾಷೆಗಳಲ್ಲಿ ಕವಿತ್ವವನ್ನು ಮಾಡಿದ್ದನು. ಇವನನ್ನು ಕವಿಯು 'ನವಕವಿತಾಗುಂಭಪುಂಭವಾಣಿ' ಎಂದು ಕರೆದು ಈತನ ಕೀರ್ತಿಯು ಆಸೇತು ಹಿಮಾಚಲದವರೆಗೂ ಪಸರಿಸಿದೆ ಎಂದು ಹೇಳಿ ಇವನನ್ನು ಪಡೆದ ಭೂಮಿ ಅಪಾರ ಲಾಭವನ್ನು ವಾಂಛಿತ ಫಲವನ್ನು ಪಡೆದು ಧನ್ಯವಾಗಿತ್ತೆಂದು ಕೀರ್ತಿಸಿದ್ದಾನೆ. ಈತನ ಅಪರಿಮಿತವಾದ ಶ್ರೇಯಸ್ಸು, ಕಟಾಕ್ಷ ಹಾಗೂ ಪ್ರಸಾದ ಗುಣಗಳನ್ನು ಕವಿ ಮೈಮರೆತು ವರ್ಣಿಸಿದ್ದಾನೆ.

ಕ್ರಿ.ಶ. ೧೬೫೮ ರಿಂದ ೧೬೭೪ರ ವರೆಗೆ ಮುಮ್ಮಡಿ ಕೆಂಪೇಗೌಡನು ಮಾಗಡಿಯಿಂದ ಆಡಳಿತ ನಡೆಸಿದ ಬಗ್ಗೆ ಶಾಸನಗಳು ಆಧಾರ ಒದಗಿಸುತ್ತವೆ. ಕ್ರಿ.ಶ. ೧೬೫೮ರ ದಾನ ಶಾಸನದ ನಕಲು ಸೂರ್ಯಗ್ರಹಣ ಸಂದರ್ಭದಲ್ಲಿ ಹೆಬ್ಬಾರ್ರೈಯನ ಮಗ ಶೇಷೈಯ್ಯಂಗಾರನಿಗೆ ವೀರಭದ್ರಸ್ವಾಮಿಯ ಸನ್ನಿಧಿಯಲ್ಲಿ ಕೊಟಗಾರ ಸಿದ್ಧಪ್ಪನಹಳ್ಳಿಯನ್ನು ಶ್ರೀನಿವಾಸಪುರವೆಂದು ಹೆಸರಿಟ್ಟು ದಾನ ಕೊಟ್ಟ ವಿವರವನ್ನು ನೀಡುತ್ತದೆ. ಕ್ರಿ.ಶ. ೧೬೬೭ರ ಮಾಗಡಿ ತಾ॥ ಅರಳಕುಪ್ಪೆ ಶಾಸನ ಕಾಶಿಯಲ್ಲಿ ಮಠಕಟ್ಟಿಸಿ ಲಿಂಗ ಪ್ರತಿಷ್ಠೆ ಮಾಡಿಸಿ ಆ ಮಠದ ಧರ್ಮಕ್ಕಾಗಿ ಅಳಲುಕುಪ್ಪೆಗ್ರಾಮವನ್ನು ಅಕ್ಷಂತಲ ಮುದ್ದು ಭಟ್ಟನಿಗೆ ದಾನ ಕೊಟ್ಟಿರುವ ಸಂಗತಿಯನ್ನು

ತಿಳಿಸುತ್ತದೆ. ಹಾಗೇ ಕ್ರಿ.ಶ. ೧೬೭೪ರ ಮಾಗಡಿ ತಾ॥ ಕೆಂಪಸಾಗರ ಗ್ರಾಮದ ಶಾಸನವು ಆ ಗ್ರಾಮವನ್ನು ೧೨ ವೃತ್ತಿಗಳನ್ನಾಗಿ ವಿಂಗಡಿಸಿ ದತ್ತಿ ನೀಡಿರುವುದಾಗಿದೆ. ಇದೇ ವರ್ಷಕ್ಕೆ ಸೇರಿದ ಇನ್ನೆರಡು ಶಾಸನಗಳು ಚತಲದಶೆಬೋಯಿ ಮತ್ತು ಭಕ್ತರಾಶೆಬೋಯಿ ಎಂಬುವವರಿಗೆ- ಕೆಂಪಸಾಗರ ಕೆರೆ ಕಟ್ಟಿದುದಕ್ಕಾಗ ಹಾಲಸಟ್ಟಿಹಳ್ಳಿ, ಸೀಪತಿಹಳ್ಳಿ ಮತ್ತು ಹಾರೋಹಳ್ಳಿಗಳಲ್ಲಿ ಭೂದಾನ ನೀಡಿರುವ ಸಂಗತಿಯನ್ನು ದಾಖಲಿಸಿವೆ. ಅಂದರೆ ಮುಮ್ಮಡಿ ಕೆಂಪೇಗೌಡನ ಕಾಲದಲ್ಲಿ ಹಿಂದಿನಂತೆ ವಿಪ್ರಸಂಸ್ಥಾಪನೆ, ಮಠಮಾನ್ಯ ಸ್ಥಾಪನೆ ಹಾಗೂ ಕೆರೆಗಳ ರಚನಾ ಕಾರ್ಯ ಮುಂದುವರೆದಿರುವುದನ್ನು ದಾಖಲಿಸುವುದರ ಮೂಲಕ ಕೆಂಪೇಗೌಡರ ಧಾರ್ಮಿಕತೆ ಮತ್ತು ಸಾಮಾಜಿಕ ಕಳಕಳಿಯನ್ನು ದೃಢೀಕರಿಸಿರುವುದು ಕಾಣಬಹುದಾಗಿದೆ.

ಮಾಗಡಿಯಿಂದ ಆಡಳಿತ ನಡೆಸಿದ ಮುಂದಿನ ಪ್ರಭು ದೊಡ್ಡವೀರಪ್ಪಗೌಡ. ಈತ ಮುಮ್ಮಡಿ ಕೆಂಪೇಗೌಡ ಬಸವಮಾಂಬೆಯ ಪುತ್ರರಲ್ಲಿ ಒಬ್ಬ. ಈತನ ಬಗ್ಗೆ ವೀರಭದ್ರ ವಿಜಯದಲ್ಲಿ ಬಹುವಿಸ್ತಾರವಾದ ವರ್ಣನೆ ಬಂದಿದೆ. 'ಇವನು ರಣರಂಗದಲ್ಲಿ ಶೌರ್ಯವನ್ನು ಪ್ರದರ್ಶಿಸಿ ಭೂಮಿಯನ್ನು ಗೆದ್ದು, ಉಪವನವನ್ನಾಗಿ ಮಾಡಿ ಸಂಪತ್ತನ್ನು ಹಂಚುವ ಬುದ್ಧಿಯುಳ್ಳ ರಾಜಾಧಿರಾಜನೆನಿಸಿದ್ದನು. ಈತನು ಗ್ರಹಗಳಲ್ಲಿ ಸೂರ್ಯನಂತೆ ಶೈಲಗಳಲ್ಲಿ ಸುರಾಚಲದಂತೆ ಅತ್ಯಧಿಕ ಶೋಭೆಯುಳ್ಳವನಾಗಿದ್ದನು. ಈತನು ಮಾಡಿದ ಧರ್ಮವು ಆಕಾಶದಂತೆ ಎಲ್ಲೆಡೆ ಹರಡಿದ್ದು ಭೂಮಿಯಲ್ಲಿ ದಾನವೆಂಬ ಪ್ರವಾಹವು ಹರಿಯುತ್ತಿತ್ತು. ಅಖಿಲವೈರಿಗಳ ಸಮೂಹಕ್ಕೆ ತೇಜೋಭಾನುವಿನಂತಿದ್ದ ವೀರಭೂಪಾಲನು ಉದಿಸಿದ್ದರಿಂದ ಗಿರಿಕಂದರಗಳು ರಿಪುಕಾಮಿನಿಯರ ಹಾರಗಳಾದವು. ಅಲ್ಲದೆ ಆತನು ತನ್ನ ಪರಾಕ್ರಮದಿಂದ ಸಾಧಿಸಿದ ಭೂಮಿಯನ್ನು ಧರಿಸಿದ ಪರಮ ಪುರುಷನೆನಿಸಿದ್ದನು. ವೀರಭೂಪಾಲನು ಪೂರ್ವ, ಪಶ್ಚಿಮ ಮತ್ತು ಉತ್ತರ ದಿಕ್ಕಿನ ರಾಜರನ್ನೆಲ್ಲ ಸದೆಬಡಿದು, ಕೀರ್ತಿವಂತನಾಗಿ ದಾಕ್ಷಿಣಾತ್ಯ ರಾಜರ ಪಾಲಿಗೆ ಪ್ರಾಣವಾಯುವಿನಂತಿದ್ದನು. ಇವನು ನಿಜವಾಗಿಯೂ ಮಹೇಶ್ವರನ ಪರಿಣಾಮವಾಗಿ ಉದಿಸಿದ ಧರ್ಮಾವತಾರ (ವೀರಭದ್ರನೇ ಸರಿ), ನಿಧಾನವಾಗಿ ಗಮನಿಸಿದರೆ ಆಸ್ಥಾನಮಂಟಪ ವಾಗಿದ್ದನು. ವಿದ್ವಾಂಸರಿಗೆ, ಕವಿಗಳಿಗೆ ಸ್ಫೂರ್ತಿದಾತನಾದ ಇವನನ್ನು ಯಲಹಂಕ ವಂಶದ 'ಭಾಗ್ಯವಂತ'ನೆಂದು ವರ್ಣಿಸಿದ ಕವಿ ಈತನನ್ನು ಯಾರು ಪುಂಡರೀಕಾಕ್ಷನೇ ಆಗಿದ್ದರೂ ಜನಾರ್ಧನನಲ್ಲ. ಚತುರಾನನನಾಗಿದ್ದರೂ ಬ್ರಹ್ಮನಲ್ಲ, ಸ್ನೇಹಪೂರ್ಣ ತೇಜಸ್ಸುಳ್ಳವನಾದರೂ ಕಮಲವೈರಿಯಲ್ಲ, ಕಳಾನಿಧಿಯಾಗಿದ್ದರೂ ದೋಷಕರನಲ್ಲ. ವಿಷಮಾಯುಧನಾದರೂ ಸಜ್ಜನರನ್ನು ಹಿಂಸಿಸುತ್ತಿರಲಿಲ್ಲ, ಧರ್ಮರಾಜನೇ ಆಗಿದ್ದರೂ ಯಮಧರ್ಮನಲ್ಲ. ಚಲನಶೀಲ ನಾದರೂ ಅನಿಲನಲ್ಲ ಎಂದು ಪ್ರಶಸ್ತಿರುವುದಲ್ಲದೆ ಭೂಮಿಯಲ್ಲಿ ಯಾರ ಅಭ್ಯುದಯವನ್ನು ತಿಳಿದವರು ಮತ್ತು ಚಾರಣರು ಆಶಿಸುತ್ತಿದ್ದರೋ, ಯಾರಲ್ಲಿ, ದ್ವೇಷವೆಂಬುದು ಬಾಹ್ಯ ಅಭ್ಯುದಯವಾಗಿತ್ತೋ, ಶಾಸ್ತ್ರೀಯವಾಗಿದ್ದರೂ, ತಾರಿಕವಾಗಿ ಯಾರು ಪುನಃ ಪನಃ ರಾಜರನ್ನು ಒಟ್ಟು ಗೂಡಿಸುತ್ತಿದ್ದರೋ ಆ ದೊಡ್ಡ ವೀರಭೂಪಾಲ ರಾಜನನ್ನು ಜನರು ಆರಾಧಿಸುತ್ತಿದ್ದರು ಎಂದು ಹೇಳಿರುವ ಕವಿ, ವೀರಭೂಪಾಲರಾಜನು ಯಶೋವಂತನೂ ಸನ್ನಡತೆಯಿಂದ ಪವಿತ್ರೀಕರಿಸಿದ ಭೂಮಂಡಲದ ಅಧಿಪತಿಯಾಗಿ ಐಶ್ವರ್ಯದಿಂದ ಕೂಡಿ ರಾಜಾಧಿರಾಜರನ್ನು ಮೀರಿಸಿದ್ದನೆಂದೂ ಮನತುಂಬಿ ಹೊಗಳಿದ್ದಾನೆ.

ಈ ವೀರಭೂಪಾಲ ಅಂದರೆ ದೊಡ್ಡ ವೀರಪ್ಪಗೌಡನ ಕಾಲದಲ್ಲಿ ಹುಟ್ಟಿಕೊಂಡ ಶಾಸನಗಳು ಮಾಗಡಿಯಲ್ಲೆ ಇದ್ದು ಶ್ರೀವತ್ಸಗೋತ್ರದ ತಿಪ್ಪಯ್ಯಂಗಾರ ಮೊದಲಾದ ೧೩ ಜನರಿಗೆ ಕಲ್ಲಿಕೆರಡೊಂಕನಪುರಗಳನ್ನು ದಾನ ನೀಡಿರುವುದನ್ನು ಕ್ರಿ.ಶ. ೧೬೮೧ರ ಶಾಸನವೊಂದು ದಾಖಲಿಸಿದರೆ, ಕ್ರಿ.ಶ. ೧೬೮೪ರ ದಾನ ಪತ್ರದ ನಕಲಿನ ಶಾಸನವು ಶೀಗೆಕುಪ್ಪೆಗ್ರಾಮವನ್ನು ಶೃಂಗೇರಿಮಠಕ್ಕೂ, ಅರಕೆಬೇಡರಹಳ್ಳಿಯನ್ನು ಸುಬ್ರಹ್ಮಣ್ಯಸ್ವಾಮಿಗೂ ಅಳಲಕುಪ್ಪೆಯನ್ನು ತನ್ನ ಹಿರಿಯರು ಕಾಶೀಧರ್ಮಕ್ಕೆ ಕೊಟ್ಟಿದ್ದಾರೆ ಎಂದು ತಿಳಿಸುತ್ತದೆ. ಇವು ಕಾವ್ಯದಲ್ಲಿ ವರ್ಣಿತವಾಗಿರುವ ಈತನ ಗುಣಾವಳಿಗಳಿಗೆ ಪೋಷಕವಾಗಿರುವುದು ಸರಿಯಷ್ಟೆ.

ಎಲಹಂಕನಾಡ ಪ್ರಭುಗಳ ವಂಶೀಯರಲ್ಲಿ ಅಧಿಕೃತವಾಗಿ ಕೊನೆಯವನೆಂದರೆ ಕೆಂಪವೀರಪ್ಪಗೌಡ ಅಥವಾ ಎರಡನೆಯ ಇಮ್ಮಡಿ ಕೆಂಪ. ಇವನನ್ನು ಕುರಿತು ಏಕಾಂಬರದೀಕ್ಷಿತನು, 'ಪ್ರತಿಭಾವಂತ ವಿದ್ವಾಂಸರನ್ನು ಅಮಾತ್ಯರನ್ನು ಹೊಂದಿದ್ದನೆಂದು ಹೇಳಿ ಬಲ ಸಾಹಸಗಳೆಂಬ ಮುಗುಳ್ನಗೆಯಿಂದ ಕೂಡಿ ವಿಕ್ರಮಾದಿತ್ಯನನ್ನು ಮೀರಿಸುತ್ತಿದ್ದನೆಂದು, ವಿಚಿತ್ರ ಕಾರ್ಯಗಳಿಂದ ರಾಜರೆಲ್ಲರಿಂದ ಸ್ತುತ್ಯನಾಗಿದ್ದಾನೆಂದು, ಸಕಲವಿದ್ಯಾ ಪಾರಂಗತನೂ, ಕರಕಲಿತ ಕೃಪಾಣನೂ, ಕಾಮಿನಿಯರಿಗೆ ಮನ್ಮಥಪ್ರಾಯನೂ ಆಗಿದ್ದ ಈತನು ತೇಜಸ್ಸಿನಿಂದ ಕೂಡಿದ್ದು ಯುದ್ಧ ಭೀತಿಯನ್ನು ಹೋಗಲಾಡಿಸಿದವನು, ಸ್ವರ್ಗವೆಂಬಂತೆ ರಾಜ್ಯವನ್ನು ಪಾಲಿಸುತ್ತಿದ್ದ ಈ ರಾಜನಿಗೆ ಜಯವಾಗಲಿ' ಎಂದು (ಕವಿ) ಹರಸಿದ್ದಾನೆ. ಜೊತೆಗೆ ಈತನ ಶಕ್ತಿ ಸಾಮರ್ಥ್ಯವನ್ನು ಕುರಿತು 'ಇವನು ಶಕ್ತಿ(ವಜ್ರಾಯುಧ)ಯನ್ನು ಹಿಡಿದ ಕುಮಾರನಂತೆ ಶ್ರೇಷ್ಠವಾದ ಭೂಮಿಯನ್ನು ಜಯಿಸಿದವನಾಗಿದ್ದಾನೆ. ಬಲಿಧ್ವಂಸಿಯಾದ ಪದ್ಮನಾಭನಂತೆ ಪರಾಕ್ರಮಶಾಲಿ, ಈತನ ಸಹಜ ವಿಜಯನಾದ ಯುಧಿಷ್ಠರ. ಈತನು ಭೀಮಸೇನ, ದುರ್ಯೋಧನರಿಗೆ ಉದಿಸಿದ ಮತ್ತೊಬ್ಬ ಪ್ರಬಲಪ್ರತಿಸ್ಪರ್ಧಿ ಎಂದೂ ಪಿತೃವಾಕ್ಯ ಪರಿಪಾಲನೆಯಲ್ಲಿ 'ದಾಶರಥಿ' ಎಂದೂ ಬಣ್ಣಿಸಲ್ಪಟ್ಟಿದ್ದಾನೆ. ಈ ವಿವರಗಳು ಈ ಅರಸರ ಧರ್ಮಭೀರುತ್ವದ ಪ್ರತಿಫಲಿತವೆನ್ನುವುದರಲ್ಲಿ ಸಂದೇಹವಿಲ್ಲ.

ಅಂತೆಯೇ ಈ ಅರಸನಿಗೆ ಸಂಬಂಧಿಸಿದಂತೆ ಸುಮಾರು ೧೨ ಶಾಸನಗಳು ಕ್ರಿ.ಶ. ೧೬೯೭ ರಿಂದ ೧೭೧೫ರ ವರೆಗೂ ಅವಿರತವಾಗಿ ಹುಟ್ಟಿಕೊಂಡಿದ್ದು ಮಾಗಡಿ ಮತ್ತು ಮಾಗಡಿ ಪರಿಸರದಲ್ಲಿ ಹಾಗೂ ಕುಕ್ಕೆ ಸುಬ್ರಹ್ಮಣ್ಯ ಮುಂತಾದ ಸ್ಥಳಗಳಲ್ಲಿ ಲಭ್ಯವಾಗಿವೆ. ವಿಪ್ರ ಸಂಸ್ಥಾಪನೆ, ದೇವಾಲಯಗಳಲ್ಲಿನ ಪೂಜಾಕೈಂಕರ್ಯಗಳಿಗೆ ತನ್ನ ತಂದೆ ತಾಯಿಗಳಿಗೆ ಪುಣ್ಯವಾಗಲೆಂದು ಜಡೇವಡೆಯರ ಮಠ ಮುಂತಾದ ಮಠಮಾನ್ಯಗಳಿಗೆ ಗ್ರಾಮ-ಭೂಮಿದಾನಗಳನ್ನು ದತ್ತಿಯಾಗಿ ನೀಡಿರುವ ಬಗ್ಗೆ ಈ ಶಾಸನಗಳಿವೆ.

ಕ್ರಿ.ಶ. ೧೭೧೪ರಲ್ಲಿ ಮೈಸೂರಿನ ಒಂದನೇ ಕೃಷ್ಣರಾಜನು ಈತನ ರಾಜ್ಯವನ್ನು ಆಕ್ರಮಿಸಿಕೊಂಡಿದ್ದರ ಸೂಚನೆ ಶಾಸನವೊಂದರಿಂದ ತಿಳಿಯುತ್ತದೆ. ಆದರೆ ಮರುವರ್ಷವೆ ಅಂದರೆ ಕ್ರಿ.ಶ. ೧೭೧೫ರಲ್ಲಿ ಅಂದರೆ ಶಕ ೧೬೩೭ ಮನ್ಮಥ, ವೈಶಾಖ ಮಾಸದವೇಳೆಗೆ ಈತನು ರಾಜ್ಯದ ಮೇಲೆ ತನ್ನ ಅಧಿಕಾರವನ್ನು ಪುನರ್‌ಸ್ಥಾಪಿಸಿಕೊಂಡಿದ್ದ ಸಂಗತಿ ಮಾಗಡಿ ಸೋಮೇಶ್ವರ ದೇವಾಲಯದ ಶಾಸನವೊಂದರಿಂದ ದೃಢಪಡುತ್ತದೆ. ಆದರೆ ಈತನಿಗೂ ಮೈಸೂರ ದಳವಾಯಿಗಳಿಗೂ ಮುಂದೆ ಅನೇಕ ಕಾಳಗಗಳು ನಡೆದು ಕ್ರಿ.ಶ. ಸುಮಾರು

೧೭೨೮ರಲ್ಲಿ ದಳವಾಯಿ ಕಳಲೆದೇವರಾಜಯ್ಯನು ಮಾಗಡಿ ರಾಜ್ಯವನ್ನು ಆಕ್ರಮಿಸಿ ಕೆಂಪವೀರಪ್ಪ ಗೌಡನನ್ನು ಶ್ರೀರಂಗಪಟ್ಟಣದಲ್ಲಿ ಬಂಧನದಲ್ಲಿಡಲಾಗಿತ್ತೆಂದು ತಿಳಿಯುತ್ತದೆಯಾದರೂ ಮುಂದಿನ ಇವರ ಇತ್ತಿವೃತ್ತದ ಬಗ್ಗೆ ಅಧಿಕೃತ ಮಾಹಿತಿಗಳಾವುವೂ ತಿಳಿಯುತ್ತಿಲ್ಲ.

ಕ್ರಿ.ಶ. ೧೬ನೇ ಶತಮಾನದಿಂದ ೧೮ನೇ ಶತಮಾನದ ಪೂರ್ವಾರ್ಧದವರೆಗೆ ಅಧಿಕೃತವಾಗಿ ಬೆಂಗಳೂರು ಜಿಲ್ಲೆಯ ಬಹುಭಾಗವನ್ನೊಳಗೊಂಡಂತೆ ತುಮಕೂರು ಜಿಲ್ಲೆಯ ತುಮಕೂರು ಕುಣಿಗಲ್ ತಾಲೂಕು ಪ್ರದೇಶಗಳ ಮೇಲೆ ತಮ್ಮ ಆಡಳಿತವನ್ನು ನಡೆಸಿದ ಯಲಹಂಕನಾಡ ಪ್ರಭುಗಳು ಅಪಾರ ಜನಪ್ರಿಯತೆಯನ್ನು ಪಡೆದಿದ್ದರು. ಇವರು ಧಾರ್ಮಿಕ ನೀತಿ, ಶಿಕ್ಷಣ, ಸಾಹಿತ್ಯ ಕಲೆಗಳ ಪೋಷಣೆ ಮೊದಲಾದ ವಿಷಯಗಳಲ್ಲಿ ವಿಜಯನಗರದ ಆದರ್ಶವನ್ನು ಅನುಸರಿಸಿದರೂ ಅವರಿಗಿಂತಲೂ ಒಂದು ಹೆಜ್ಜೆ ಮುಂದಿದ್ದರೆಂದು ಹೇಳಬಹುದಾಗಿದೆ. ಇವರು ವಿಜಯನಗರದ ದೊರೆಗಳಷ್ಟು ಯುದ್ಧ ಪ್ರಿಯರಾಗಿರಲಿಲ್ಲ. ಇವರಿಗೆ ಯುದ್ಧ ಆಕ್ರಮಣಗಳಿಗಿಂತಲೂ ಪ್ರಜಾಹಿತ ಕಾರ್ಯಗಳ ಕಡೆಗೆ ಹೆಚ್ಚು ಗಮನವಿದ್ದಿತು. ವಿಜಯನಗರ ದಲ್ಲಿದ್ದ ತೆರಿಗೆಯಭಾರ ಇವರ ರಾಜ್ಯದ ಪ್ರಜೆಗಳ ಮೇಲೆ ಇರಲಿಲ್ಲವೆಂದು ತೋರುತ್ತದೆ. ಇವರು ತಮ್ಮ ಸೀಮಿತ ಆಡಳಿತ ಪ್ರದೇಶದಲ್ಲಿ ಪ್ರಜೆಗಳ ಸಮಸ್ಯೆಗಳನ್ನು ಬಗೆಹರಿಸಿ ಅವರು ನೆಮ್ಮದಿಯಿಂದ ಜೀವಿಸಲು ಎಲಹಂಕ ನಾಡಪ್ರಭುಗಳು ಅನುವುಮಾಡಿಕೊಟ್ಟಿದ್ದರು. ಹೀಗೆ ಈ ಸಾಮಾನ್ಯ ಜನರ ಜೀವನ ಸ್ಥಿತಿಯು ಸುಖ ಶಾಂತಿ ಸಮೃದ್ಧಿಗಳಿಂದ ಕೂಡಿದ್ದಿತು. ಹಾಗಾಗಿ ಅವರ ಪ್ರಜೆಗಳು ವಿಜಯನಗರದ ಪ್ರಜೆಗಳಿಗಿಂತ ಹೆಚ್ಚು ನೆಮ್ಮದಿಯಿಂದಿದ್ದರು. ಅಂತೆಯೇ ಜನಪ್ರಿಯ ಪ್ರಭುಗಳಾದ ಕೆಂಪೇಗೌಡರು ಧರ್ಮಪ್ರಭುಗಳು ಎಂದು ವಿಖ್ಯಾತ ರಾಗಿದ್ದರು.

*(ದಿನಾಂಕ : ೦೪-೦೪-೨೦೦೩ರಲ್ಲಿ ಬೆಂಗಳೂರು ವಿಶ್ವವಿದ್ಯಾಲಯ ಏರ್ಪಡಿಸಿದ್ದ ಕೆಂಪೇಗೌಡ ವಂಶೀಯರ ವಿಚಾರ ಸಂಕಿರಣದಲ್ಲಿ ಮಂಡಿಸಿದ ಪ್ರಬಂಧ)*

**ಆಧಾರ ಗ್ರಂಥ ಸೂಚಿ:**


ಎಪಿಗ್ರಾಫಿಯಾ ಕರ್ನಾಟಕ (ಹಳೇ), ಸಂಪುಟ IX ಮತ್ತು ಪುರವಣಿ, XII, XVI, XVII.

ಮೈಸೂರು ಪುರಾತತ್ವ ವಾರ್ಷಿಕ ವರದಿಗಳು, ೧೯೨೫, ೧೯೩೮, ೧೯೩೯ ಮತ್ತು ೧೯೪೩

ಇತಿಹಾಸ ದರ್ಶನ : ಸಂಪುಟ ೪ (೧೯೮೯), ೫ (೧೯೯೦), ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು

ಕನ್ನಡ ಸಾಹಿತ್ಯ ಪರೀಷತ್ಪತ್ರಿಕೆ . ಸಂಪುಟ ೭೭, ಸಂಚಿಕೆ ೨-೪(೧೯೯೯),

ಕರ್ನಾಟಕ ಲೋಚನ : ಸಂಪುಟ ೧, ಸಂಚಿಕೆ ೨, (ಡಿಸೆಂಬರ್ ೧೯೯೮)

ಬೆಂಗಳೂರು ಕೆಂಪೇಗೌಡಗ ವಂಶಸ್ಥರು, (ಸಂ) ಎಂ.ಎಚ್. ಕೃಷ್ಣಯ್ಯ, ಡಾ.ದೇವರಕೊಂಡಾರೆಡ್ಡಿ, ಜತನಾ ಶಿಕ್ಷಣ ಸಂಸ್ಥೆ, ವಿವೇಕಾನಂದ ಕಾಲೇಜು, ಬೆಂಗಳೂರು, ೧೯೯೬.

ಯಲಹಂಕ ಪ್ರಭುಗಳು - ಒಂದು ಅಧ್ಯಯನ, (ಸಂ) ಡಾ.ಟಿ. ದಯಾನಂದ ಪಟೇಲ್, ಜಿ.ಟಿ. ವೀರಪ್ಪ, ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಮಂಡ್ಯ (೧೯೯೪).

ಗೌಡಕುಲ ವಿಭೂಷಣ ಕೆಂಪೇಗೌಡನ ಜಯಪ್ರಶಸ್ತಿ, (ಸಂ) ಕರ್ಲಮಂಗಲಂ ಶ್ರೀಕಂಠಯ್ಯ, ಕರ್ಲಮಂಗಲಂ, ಮಾಗಡಿ ತಾಲ್ಲೂಕು ೧೯೬೧.


❒

# ೮. ಡಿ.ಎಲ್.ಎನ್. : ಶತಮಾನ ಸ್ಮರಣೆ

■ ಎಂ.ಫಿಲ್ ಸಂಶೋಧನ ವಿದ್ಯಾರ್ಥಿ

೧೧-೧೧-೨೦೦೫: ಗೋಷ್ಠಿ-೧

**ಡಾ. ಟಿ.ವಿ. ವೆಂಕಟಾಚಲಶಾಸ್ತ್ರೀ**

ಗ್ರಂಥಸಂಪಾದನೆ, ಸಾಹಿತ್ಯಚರಿತ್ರೆ, ಶಬ್ದಾರ್ಥವಿಹಾರ, ಕವಿಕಾವ್ಯ ವಿಮರ್ಶೆ ಎಂಬ ನಾಲ್ಕು ಮುಖಗಳಲ್ಲಿ ಡಿಎಲ್‌ಎನ್ ಸಾಹಿತ್ಯಕೃಷಿ ಮಾಡಿದ್ದಾರೆ. ಕವಿಚರಿತ್ರೆಯನ್ನು ಸಾಹಿತ್ಯಚರಿತ್ರೆಯನ್ನಾಗಿ ಮಾಡಿದ ಗಾರುಡಿಗ. ಇವರು ಅಧ್ಯಯನಮಾಡದೇ ಇದ್ದ ವಿಷಯದ ಬಗ್ಗೆ ಮಾತನಾಡುತ್ತಿರಲಿಲ್ಲ. ತುಲನಾತ್ಮಕದೃಷ್ಟಿಯಿಂದ ಸಾಹಿತ್ಯವನ್ನು ಹೃದ್ಗತ ಮಾಡಿಕೊಂಡು ಅನುಭವಿಸಿ ಹೇಳುವ ವ್ಯಕ್ತಿತ್ವ ಹೊಂದಿದ್ದವರು. ವಿವರಣೆಯ ಸಂದರ್ಭಕ್ಕೆ ತಕ್ಕಂತೆ ಕಾವ್ಯಗಳನ್ನು ಉದ್ಧರಿಸುತ್ತಿದ್ದರು. 'ಹೊಸಗನ್ನಡದಲ್ಲಿ ಎಲ್ಲರೂ ತನ್ಮಯರಾದರೆ ಹಳಗನ್ನಡಸಾಹಿತ್ಯ ತಿಳಿಸೋರು ಯಾರಯ್ಯ?' ಎಂದು ಹೇಳುತ್ತಿದ್ದರು. ಹಾಗೆಯೇ ಬಯಲಲ್ಲಿ ತುಂಡುದನ ಮೇಯೋಹಾಗೆ ಮೇಯ್ದು ಮೆಲುಕು ಹಾಕಬೇಕು, ಶಬ್ದಮಣಿದರ್ಪಣದ ಪಾರಾಯಣ ಮಾಡಿ ಸಾರಾಸಾರ ವಿವೇಚನೆ ಬರುತ್ತೆ ಎಂಬ ಸಂದೇಶವನ್ನು ನೀಡುತ್ತಿದ್ದರು. ಹಸ್ತಪ್ರತಿ ಸಂಗ್ರಹ ಕೆಲಸದಲ್ಲಿ ಅನನ್ಯವಾದ ಕೆಲಸ ಅವರದು. ತುಲನಾತ್ಮಕವಾಗಿ ಪ್ರಾಚೀನರಕಾವ್ಯದ ಅಧ್ಯಯನ ಜ್ಞಾನದಕಣಗಳನ್ನು ವಿವಿಧ ಮೂಲ ಗಳಿಂದ ಸಂಗ್ರಹಿಸುವ ಮನೋಭಾವ ಇವರದಾಗಿತ್ತು. ತೀ.ನಂ.ಶ್ರೀ ಮೊದಲಾದವರು ಹೇಳುವಂತೆ ಡಿಎಲ್‌ಎನ್ ಜಂಗಮ ಬೃಹತ್ಕೋಶ; ಡಿಎಲ್‌ಎನ್ ಎಂದರೆ ಪಾಂಡಿತ್ಯ, ಪಾಂಡಿತ್ಯವೆಂದರೆ ಡಿಎಲ್‌ಎನ್. ಇವರಿಗೆ ತಿಳಿದಿರುವಷ್ಟು ನಮ್ಮಲ್ಲಿ ಯಾರಿಗೂ ತಿಳಿದಿಲ್ಲ.

ಇವರು ಹೇಳುವ ವಿಚಾರಗಳನ್ನು ಊಹಿಸುವುದೂ ಕಷ್ಟ. ಇವರಿಂದ ಪಾಠಕಲಿತವರೇ ಧನ್ಯರು (ಜ್ಞಾನೋಪಾಸಕ ಕೃತಿಯಲ್ಲಿ ಇವರ ಬಗ್ಗೆ ಹೆಚ್ಚಿನ ವಿವರವಿದೆ.)

**ಡಾ. ಯು.ಆರ್. ಅನಂತಮೂರ್ತಿ:**

ನವ್ಯದಲ್ಲಿ ಆಸಕ್ತಿ ಇರಲಿಲ್ಲ, ಅವರಿಗೆ ಪ್ರೀತಿ ಇದ್ದದ್ದು ಎಪಿಕ್‌ಗಳಲ್ಲಿ, ಇನ್‌ಕ್ಲೂಸಿವ್ ಆಗಿದ್ದರು. ಭೂಮಿಗೀತದಲ್ಲಿ ಮಹಾಕಾವ್ಯ ಲಕ್ಷಣವಿದೆ ಎಂದು ಒಪ್ಪಿದರು. ಡಿಎಲ್‌ಎನ್‌ರಿಗೆ ನವ್ಯದ ಬಗ್ಗೆ ವಿವರಿಸಿದಾಗ ಒಪ್ಪಿದರು.

**ಡಾ. ಬಿ.ವಿ. ವಿವೇಕರೈ :**

ಶತಮಾನದ ಸಂಶೋಧಕ ಡಿಎಲ್‌ಎನ್. ಇವರು ಅನೇಕರಲ್ಲಿ ಬರೆಸುವ, ಬರೆಯುವ ಕಾಯಕ ಮಾಡಿಸುತ್ತಿದ್ದವರು. ಇವರ ಆದರ್ಶಗಳನ್ನು ನಮ್ಮ ವೃತ್ತಿಯಲ್ಲಿ ಪ್ರವೃತ್ತಿಯಲ್ಲಿ ಪ್ರಾಮಾಣಿಕವಾಗಿ ಬಳಸಿಕೊಳ್ಳಬೇಕು. ಸಣ್ಣ ಸಣ್ಣ ಪ್ರಯತ್ನಗಳೂ ಪ್ರಮುಖವಾಗುತ್ತವೆ.

**ಡಾ. ಮಲ್ಲೇಪುರಂ ಜಿ. ವೆಂಟೇಶ್ :**

ಇಂದು ನಮ್ಮಲ್ಲಿ ವಿಸ್ತಾರತೆ ಇದೆ, ಆಳವಿಲ್ಲ. ಡಿಎಲ್‌ಎನ್ ಅವರಲ್ಲಿ ವಿಸ್ತಾರತೆ ಜೊತೆಗೆ ಆಳವೂ ಇತ್ತು. ಇಟಲಿಯ ಓರ್ವವ್ಯಕ್ತಿಗೆ ಒಂದು ಹಸ್ತಪ್ರತಿ ಬೇಕಿತ್ತು. ಅದನ್ನು ಹುಡುಕಿಕೊಂಡು ಬಹಳಷ್ಟು ಸುತ್ತಾಡಿದ, ಗಯಾಕ್ಕೆ ಬಂದ, ಅವನಿಗೆ ಬೇಕಾದುದು ತಿಬೆಟ್ ನಲ್ಲಿ ಇದೆ ಎಂದು ತಿಳಿಯಿತು. ಬೌದ್ಧಲಾಮಾ ರೀತಿ ವೇಷಧರಿಸಿ ಅವರಂತೆ ಭಾಷೆಕಲಿತು ಹಲವಾರು ವರ್ಷ ಹಲವರೊಡನೆ ಚರ್ಚೆ ಮೊದಲಾದವುಗಳನ್ನು ಮಾಡುತ್ತಾ ಹಸ್ತಪ್ರತಿಭಂಡಾರದಲ್ಲಿ ಹುಡುಕುತ್ತಿದ್ದಾಗ ಅವನಿಗೆ ಬೇಕಾದ ಹಸ್ತಪ್ರತಿ ದೊರಕಿತು. ಅಂತಹ ಸಾಹಸಿ, ಕರ್ತೃತ್ವ ಶಕ್ತಿಯನ್ನು ನಾವು ಹೆಚ್ಚಿಸಿಕೊಳ್ಳಬೇಕು.

**ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ :**

ಡಿಎಲ್‌ಎನ್ ರದು ಅನಸೂಯ ವ್ಯಕ್ತಿತ್ವ, ವಿದ್ವತ್‌ನಂತೇ ಅವರ ವ್ಯಕ್ತಿತ್ವವೂ ದೊಡ್ಡದು. ಅವರು ವಾಚೋವಿಧೇಯರು. ಜ್ಞಾನವಿರುವೆಡೆ ಶಿರಬಾಗಿ ನಮಿಸುವ ಶ್ರೇಷ್ಠವಿದ್ವತ್ ಹೊಂದಿದ ವ್ಯಕ್ತಿ.

**೧೨-೧೧-೨೦೦೫:**

**ಡಾ. ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟ :**

ಮೈಸೂರಿಗೆ ಓದಲು ಹೋದವನು ನಾನು. ಅಲ್ಲಿ ದೊಡ್ಡದೊಡ್ಡ ಜನರ ಮನೆಯಲ್ಲಿ ವಾರಾನ್ನಕ್ಕೆ ಹೋದೆ. ೧೫ ದಿನಗಳ ನಂತರ ಊಟಕ್ಕೆ ಮನೆ ದೊರೆಯಿತು. ಕೆಲವು ದಿನಗಳ ಉಪವಾಸ. ಶಾಮರಾಯರಿಂದ ಡಿಎಲ್‌ಎನ್‌ರಿಗೆ ತಿಳಿಯಿತು ನಮ್ಮನೇಲಿ ಊಟದ ತೊಡಕಾಗ ಬಹುದು. ಹೆಲ್ತ್ ಕಿಚನ್ ನಲ್ಲಿ ಎಂದಾದರೂ ಊಟಮಾಡು ಎಂದರು. ನನಗೆ ತೊಂದರೆ ಇದ್ದದನ್ನು ತಿಳಿದು ಕರೆಸಿ ಸಹಾಯಮಾಡುವಂತಹ ವ್ಯಕ್ತಿತ್ವ ಅವರದು. ನಾಲ್ಕುವರ್ಷ ಅವರ ಲೆಕ್ಕದಲ್ಲಿ ಊಟಮಾಡಿದೆ. ಬಡತನವೇ ಕಾರಣವಾಗಿ ಅವರ ಪಾಠ ಕೇಳುವುದರ ಜೊತೆ ಅವರ ಊಟಮಾಡಿದ್ದೇನೆ. "ಅವರು ಕೊಡೆಹಿಡಿದು ಬರುತ್ತಿದ್ದರೆ ಆನೆ ಕಬ್ಬಿನ ಜಲ್ಲೆ ಹಿಡಿದು ಹೋಗುವ ರೀತಿ" ಕಾಣುತ್ತಿತ್ತು. ಅವರ ತರಗತಿಯಲ್ಲಿ ಅನೇಕ ಸಂಗತಿಗಳು ಯಾರಿಗೂ ಸಿಗದೆ ಇದ್ದದ್ದು ನಮ್ಮ ಕಿವಿಗೆ ಮೊದಲು ಸಿಗುತ್ತಿತ್ತು. ಅವರ ಹೊಸ ಸಂಶೋಧನೆಗಳನ್ನು ನಮಗೆ ಹೇಳುತ್ತಿದ್ದರು.

'ಇಸಿಲ' ಪದ ಅಶೋಕನ ಪ್ರಾಕೃತ ಶಾಸನದಲ್ಲಿ ಬರುತ್ತೆ ಅನ್ನೋದು ಪ್ರಪ್ರಥಮಬಾರಿಗೆ ಹೇಳಿದವರಿವರು, ಇತರ ವಿದ್ವಾಂಸರಂತೆ ಮಾಡದೆ ಹೊಸವಿಷಯ ಎಲ್ಲರಿಗೂ ತಿಳಿಯಬೇಕು ಎಂಬಂತೆ ಹೇಳುತ್ತಿದ್ದರು.

ಅಶೋಕನ ಬ್ರಹ್ಮಗಿರಿ ಶಾಸನದಲ್ಲಿ ಇಸಿಲ ಶಬ್ದದ ಪ್ರಯೋಗವಾಗಿದೆ. ಇದು ಪ್ರಾಕೃತದಂತೆ ಕಾಣದೆ ಇದ್ದಾಗ ಯೋಚಿಸುತ್ತಿದ್ದರು, ಒಮ್ಮೆ ಕ್ಷೌರಿಕನ ಅಂಗಡಿಯಲ್ಲಿ ಇದರ ಬಗ್ಗೆ ಹೊಳೆಯಿತು. ಇದು ಕ್ರಿ.ಪೂ. ಕನ್ನಡಪದ, ಇಸು-ಎಚ್-ಹೊಡೆ, ಇಲ್-ಮನೆ, ಪಿಂತಿಲ್-ಹಿತ್ತಲು, ವಾಯಿಲ್ -ಬಾಗಿಲು ಈ ರೀತಿ. ಇಸಿಲ ಎಂದರೆ ಬಾಣಬಿಡುವ ಮನೆ-ಕೋಟೆ. ಎರಡನೇ ಶತಮಾನದ ಪದವಿದು.

ಇಂತಹವುಗಳನ್ನೆಲ್ಲ ತರಗತಿಯಲ್ಲಿ ಹೇಳುತ್ತಿದ್ದರು. ಮುಂದೆ ಯಾರದಾದರೂ ಒತ್ತಡ ಬಂದಾಗ ಲೇಖನಬರೆಯುತ್ತಿದ್ದರು. ತೀನಂಶ್ರೀ ಸಾಹಿತ್ಯಕ್ಕೆ ಅಗತ್ಯವಾದ ವ್ಯಾಕರಣ, ಭಾಷಾಶಾಸ್ತ್ರ ಮೊದಲಾದವುಗಳನ್ನು ಗಮನಿಸಬೇಕು. ಇದಕ್ಕೆ ಅನುಕೂಲವಾಗುವಂತೆ ಒಂದು ಕಾರ್ಯಾಗಾರ ಏರ್ಪಡಿಸಿ, ನೀನು ಪ್ರಬಂಧ ಮಂಡಿಸು ಎಂದು ಡಿಎಲ್‌ಎನ್ ರಿಗೆ ಹೇಳಿದರು. ಅವರು ಒಪ್ಪಲಿಲ್ಲ. ಕಡೆಗೂ ಅವರನ್ನು ಒಪ್ಪಿಸಿದರು. ಡಿಎಲ್‌ಎನ್ ಇಸಿದ ಪದದ ಬಗ್ಗೆ ಟಿಪ್ಪಣಿ ಮಾಡಿಕೊಂಡು ಅಲ್ಲಿ ಮಂಡಿಸಿದಾಗ ಅಲ್ಲಿ ನೆರೆದಿದ್ದ ದೊಡ್ಡ ದೊಡ್ಡ ಸಂಶೋಧಕರೆಲ್ಲ ಬೆಕ್ಕಸ ಬೆರಗಾದರು. ಇಂತಹ ವಿದ್ವತ್ ಹೊಂದಿದವರು ನಮ್ಮ ಡಿಎಲ್‌ಎನ್.

ನನ್ನ ಭಾರತೀಯ ಗ್ರಂಥಸಂಪಾದನಕ್ಕೆ ಪ್ರೀತಿಯಿಂದ ಮುನ್ನುಡಿ ಬರೆದರು. ತೀ.ನಂ.ಶ್ರೀ. ತರಗತಿಯಲ್ಲಿ ಗ್ರಂಥಸಂಪಾದನೆ, ಭಾಷಾಶಾಸ್ತ್ರದಂತಹ ಕೃತಿ ಕನ್ನಡಕ್ಕೆ ಬರಬೇಕು ಎಂದು ಹೇಳುತ್ತಿದ್ದರು. ದೇಶೀಭಾಷೆಯಲ್ಲಿ ಗ್ರಂಥಸಂಪಾದನೆ ಮೊದಲನೆಯದು.

ನಾನು ೨೫ಪುಟ ಬರೆದು ತೀನಂಶ್ರೀ ಅವರ ಬಳಿಗೆ ತೋರಿಸಲು ಬಂದೆ. 'ಸಾರ್ ಕತ್ರೆಯವರದು ಅನುವಾದ ಮಾಡಿದ್ದೇನೆ' ಎಂದೆ. ಶಾಸ್ತ್ರಗ್ರಂಥ ಅನುವಾದ ಮಾಡ್ತಾ ಇದ್ದಿಯಾ ತೋರು' ಎಂದರು. ಹತ್ತುದಿನಗಳಾದ ಮೇಲೆ ಸಮರ್ಥವಾಗಿ ಮಾಡಿದ್ದೀರ ಕತ್ರೆಗೆ ನಾನು ಹೇಳುತ್ತೇನೆ ಡಿಎಲ್‌ಎನ್ ಮುನ್ನುಡಿ ಬರೆಯಬಹುದು ಎಂದು ಹೇಳಿದರು. ನಂತರ ಡಿಎಲ್‌ಎನ್ ಅದಕ್ಕೆ ಮುನ್ನುಡಿಬರೆದರು. ಆ ಮುನ್ನುಡಿ ಕನ್ನಡ ಗ್ರಂಥಸಂಪಾದನೆಗೇ ಅಪೂರ್ವವಾದ ಮುನ್ನುಡಿಯಾಯಿತು. ಮದರಾಸುಕರ್ನಾಟಕ, ಮುಂಬೈಕರ್ನಾಟಕಗಳ ಬಗ್ಗೆ ಬರೆದರು, ಇವರ ಲೇಖನ ಒಳಗೊಳ್ಳುವ ಭಾಗ್ಯ ನನ್ನ ಪುಸ್ತಕಕ್ಕೆ ಸಿಕ್ಕಿತು.

ಮುಂದೆ ಬೆಂಗಳೂರಿಗೆ – ಕೆ.ಎಸ್.ನ. ರ ಶಿಲಾಲತೆಗೆ ಮುನ್ನುಡಿ ಅಡಿಗರ ಮಾರ್ಗದಲ್ಲಿ. ಅದು ತೀರ ಹೊಸರೀತಿ, ಹೆಜ್ಜೆ ಹೆಜ್ಜೆಗೆ ರೂಪಕ, ನರಸಿಂಹಾಚಾರ್ಯರು ಹಳಗನ್ನಡ ಮಹಾಕಾವ್ಯದ ಹಿನ್ನೆಲೆಯಿಂದ ಒಟ್ಟು ಇರುವ ಲಯ/ಛಂದ ಗಮನಿಸಿದವರು ಒಪ್ಪುತ್ತಿರಲಿಲ್ಲ. ಅದಕ್ಕೆ ವಿವರಣೆ ನಾನೂ ಬರೆದೆ, 'ಬರಿಗೊಡಗಳಿಗೆ ಸಮಾಧಾನ ಹೇಳುತ್ತಿದೆ ನೀರಿಲ್ಲದ ನಲ್ಲಿ' ಸುಳ್ಳು ಆಶ್ವಾಸನೆ ನೀಡುವ ರಾಜಕಾರಣಿ ವರ್ಣನೆ ಇಲ್ಲಿದೆ. ಅರ್ಥಕಳೆದುಕೊಂಡ ಮೌಲ್ಯದ ಬಗ್ಗೆ ಬದಲಾಗಬೇಕಾದುದನ್ನು ಮುಖ್ಯ ಪ್ರತಿಮೆ ಮೂಲಕ ಹೇಳಿದೆ ಎಂದೆಲ್ಲ

ಬರೆದೆ. ಅದನ್ನು ನೋಡಿದ ಅವರು 'ನೀನು ಬರೆದಿದ್ದನ್ನು ನೋಡಿದೆ' ನೀನು ಹೇಳಿದ ಮೇಲೆ ಇಡೀ ಕವನ ಓದಿದಾಗ ವಾಚ್ಯಾರ್ಥ, ಧ್ವನಿ ಇರಲೇಬೇಕು, ಇದು ನನಗೆ ಗೊತ್ತಾಗಲ್ಲ ಕಣಯ್ಯ ಎಂದೂ, ನೀನು ಹೇಳುವುದು ಸತ್ಯ ಎಂದೂ ಹೇಳಿದರು. ಪೂರ್ವಾಗ್ರಹಪಿಲ್ಲದ ಮನಸ್ಸು ಇವರದು. ತ.ಸು.ಶಾಮರಾಯ, ಎಸ್.ವಿ. ಪರಮೇಶ್ವರ ಭಟ್ಟ ಇವರೆಲ್ಲರ ನಡವಳಿಕೆ ನೆನೆಸಿಕೊಂಡರೆ ಇಂಥ ಸುಭಿಕ್ಷ ಜನರ ಮಧ್ಯೆ ಬದುಕಿದ್ದೆವಲ್ಲ ಎಂದು ಮನ ಸಂತಸಗೊಳ್ಳುತ್ತೆ. ಒಮ್ಮೆ ಅವರ ಚಿತ್ರ ಪತ್ರಿಕೆಯೊಂದರಲ್ಲಿ ಬಂದಿತ್ತು. ಅದನ್ನು ಮನೆಯಲ್ಲಿ ಇಟ್ಟಿದ್ದೆ. ಪು.ತಿ.ನ, ತೀನಂಶ್ರೀ ಅದನ್ನು ನೋಡಿ ಡಿಎಲ್‌ಎನ್ ಬಳಿ 'ಇವನೂ ಏಕಲವ್ಯ ಕಣಯ್ಯ' ಅಂತ ಹೇಳಿದಾಗ ಅವರು ನನ್ನನ್ನೊಮ್ಮೆ ನೋಡಿದ ರೀತಿ ಇವೆಲ್ಲ ನೆನಪುಗಳನ್ನು ಸುವರ್ಣಾಕ್ಷರದಲ್ಲಿ ಬರೆದಿಡಬೇಕಾದ್ದು.

**ಡಾ. ಸಾ.ಶಿ. ಮರುಳಯ್ಯ :**

ಡಿಎಲ್‌ಎನ್ ಗಾಂಭೀರ್ಯ ವ್ಯಕ್ತಿ. ಪಾಂಡಿತ್ಯದ ಪರ್ವತ. ಪಾಠದಲ್ಲೂ ಗಟ್ಟಿ, ಊಟದಲ್ಲೂ ಗಟ್ಟಿ, ಒಮ್ಮೆ ಒಂದು ಕಾರ್ಯಕ್ರಮ ಮುಗಿಸಿ ಹಿಂತಿರುಗುತ್ತಿದ್ದೆವು. ಒಂಟಿಕೊಪ್ಪಲ್‌ನಲ್ಲಿ ಕಾಫಿಗೆ ಅಂತ ಹೋದಾಗ, ಹೋಟಲಿನವನಿಗೆ ಡಿಎಲ್‌ಎನ್ 'ಏನಯ್ಯ ಏನಿದೆ ತಿಂಡಿ ತಗೊಂಡು ಬಾ ಎರಡೆರಡು' ಎಂದರು. ಇಡ್ಲಿ, ಪೂರಿ, ಮಸಾಲದೋಸೆ ಹೀಗೆ ಎಲ್ಲ ಆದಮೇಲೆ ಕಾಫಿ ಕುಡಿದು ಹೊರಟೆವು. ಡಿಎಲ್‌ಎನ್ 'ನಾನು ಮನೆಗೆ ಹೋಗಬೇಕ್ರಯ್ಯ' ಎಂದರು. 'ಯಾಕೆ ಸಾರ್' ಎಂದರೆ 'ಹನ್ನೊಂದು ಗಂಟೆಗೆ ಕ್ಲಾಸಿದೆ, ಮನೆಗೆ ಹೋಗಿ ಊಟಮಾಡಿ ಹೋಗಬೇಕು' ಎಂದರು. ಹೀಗೆ ಅವರು ಪಾಠದಲ್ಲೂ ಗಟ್ಟಿ ಊಟದಲ್ಲೂ ಗಟ್ಟಿ.

ಹರಿಶ್ಚಂದ್ರ ಕಾವ್ಯದ ಬಗ್ಗೆ ಹೇಳುವಾಗ ಹರಿಶ್ಚಂದ್ರ ತನ್ನ ಪತ್ನಿಶಿರಛೇದನ ಮಾಡುವಾಗ ಚಂದ್ರಮತಿ 'ವಿಶ್ವಾಮಿತ್ರ ನಿತ್ಯನಾಗಲಿ' ಎಂದು ಹಾರೈಸುತ್ತಾಳೆ. ಆಮಾತು ಹೇಳುವಾಗ ಸ್ತಬ್ಧರಾದ ಡಿಎಲ್‌ಎನ್ ಆ ಕವಿಯ ಭಾವ, ಅಭಿವ್ಯಕ್ತಿ ರಸ ಸನ್ನಿವೇಶದ ಬಗ್ಗೆ ಹೇಳುತ್ತಾ ಹೋದರು. ಎರಡನೆ ಆನರ್ಸ್ ಇದ್ದಾಗ ಸಾರ್ ಹರಿಶ್ಚಂದ್ರಕಾವ್ಯದ ಬಗ್ಗೆ ಮತ್ತೊಮ್ಮೆ ಕೇಳಬೇಕು ಅನ್ನಿಸುತ್ತೆ ಎಂದಾಗ ಇವತ್ತು ನಾಳೆ ಎಂದು ಹಲವು ತಿಂಗಳು ಕಳೆದರು. ಆಗ ನಾವೆಲ್ಲ ಸಾರ್ ರಾಮಕೃಷ್ಣಪರಮಹಂಸ ಬೆಲ್ಲ ತಿನ್ನಬೇಡ ಅಂತ ಹೇಳಲು ಹಲವು ದಿನಗಳನ್ನು ತಗೆದುಕೊಂಡು ಆಮೇಲೆ 'ತಿನ್ನಬೇಡ' ಅಂತ ಹೇಳಿದರಂತೆ ಎಂದಾಗ, ಆಗಲಿ ಮುಂದಿನವಾರ ಹೇಳುತ್ತೇನೆ ಎಂದು ಹೇಳಿದವರು 'ಅತ್ಯದ್ಭುತವಾದ ರೀತಿಯಲ್ಲಿ ವ್ಯಾಖ್ಯಾನನೀಡಿದರು. 'ಒಮ್ಮೆ ಸ್ಟಾಫ್ ರೂಮಿನಲ್ಲಿ ಜೋರು ಗಲಾಟೆ, ಶಾಮರಾಯರು ಅಶ್ವತ್ಥಾಮನ್ ಕೃತಿಯನ್ನು ಬಿಎಂಶ್ರೀ ಹೀಗೆ ಬರೆಯಬಾರದಿತ್ತು ಎಂದಾಗ ಡಿಎಲ್‌ಎನ್ ಜೋರಾಗಿ ಟ್ರಾಜಿಡಿ ಅಂದ್ರೆಏನ್‌ತಿಳ್ಕೊಂಡಿದ್ದೀಯಯ್ಯಾ ಎಂದು ಹೇಳುತ್ತಾ ಎಜಾಕ್ಸ್ ನಾಟಕಕ್ಕೆ ಹೊಸರೂಪ ಕೊಟ್ಟವರು ಬಿ.ಎಂ.ಶ್ರೀ, ಅಲ್ಲಿ ಖಡ್ಗ ಶ್ರೇಷ್ಠರಿಗೆ ಮೀಸಲು, ಅದು ಅಗಮೆಮ್ನಾನ್ಗೆ ಸಿಗುತ್ತೆ, ಅದರಿಂದ ಹೋರಾಟ ಎಲ್ಲ ಆಗತ್ತೆ, ನಮ್ಮಲ್ಲಿ ಅಶ್ವತ್ಥಾಮನ್ ಕಾಳರಾತ್ರಿಪ್ರಸಂಗ, ದೈವಭಕ್ತ, ಎಜಾಕ್ಸ್ ಅಶ್ವತ್ಥಾಮನ್ ಎರಡೂ ಒಟ್ಟಿಗೇ ಓದಬೇಕು ಎಂದೆಲ್ಲಾ ವಿವರಿಸಿ ಹೇಳಿದರು.

ಅಲ್ಲಿಂದ ಬರುವಾಗ ದಾರಿಯಲ್ಲಿ 'ಸಾರ್! ಪೆರಳ್ಗೆ ಕೂರಳ್ ಟ್ರಾಜಿಡಿಯೋ? ಕಾಮಿಡಿಯೋ' ಎಂದಾಗ ದ್ರೋಣನ ಆತ್ಮಪತನದ ಬಗ್ಗೆ ಇರುವ ಚಿತ್ರಣನೋಡು 'ಇಟ್ ಇಸ್ ಎ ಟ್ರಾಜಿಡಿ ಆಫ್ ಎ ಸೋಲ್' ಎಂದು ಹೇಳಿದರು.

ಹಾಗೆ ಸ್ಮಶಾನಕುರುಕ್ಷೇತ್ರದ ಅಂತ್ಯದಲ್ಲಿ ಪರಮಾತ್ಮ-ದುರ್ಯೋಧನಚಿತ್ರಣ ದಿವ್ಯಾಂತ ಎಂದು ಹೇಳಬಹುದೇ ಎಂದಾಗ ಇದನ್ನು ಬೇರೆಲ್ಲಿಯೂ ಹೇಳಬೇಡ ನಿನ್ನ ಅಂತ್ಯವಾಗುತ್ತೆ ಎಂದರು. ಡಿಎಲ್‌ಎನ್ ಕಡ್ಡಿನಾಮ, ಜರಿಪೇಟಧರಿಸಿ ಮದ್ದಾನೆಯಂತೆ ತಲದೂಗುತ್ತಮಾತಾಡು ತ್ತಿದ್ದರು. ಯಾರನ್ನೂ ಹೆಚ್ಚು ಹಚ್ಚಿಕೊಳ್ಳದ, ಸರಿ ಎಂದರೆ ಸರಿ ಎಂದು ತಪ್ಪು ಎಂದರೆ ತಪ್ಪು ಎಂದು ಹೇಳುವಂತಹ ವ್ಯಕ್ತಿ. ಇಂತಹವರ ಸಾನಿಧ್ಯ ನಮಗೆ ಲಭ್ಯವಾಗಿದ್ದು ನಮ್ಮ ಪುಣ್ಯ ಎಂದೇ ಹೇಳಬಹುದು.

**ಪ್ರೊ. ಎಂ.ಎಚ್. ಕೃಷ್ಣಯ್ಯ :**

ನೆನಪುಗಳೂ ಮರೆತಿರುವಂತೆ ಇದ್ದರೂ ಕೆದಕಿದ ಹಾಗೆ ಬಂದವು ಅ.ರಾ. ಮಿತ್ರನ ನೆನಪಿನ ಶಕ್ತಿ, ಅಗಾಧ. ಶಾಸ್ತ್ರ, ವಿದ್ವತ್, ಪಾಂಡಿತ್ಯ ಮಾನವೀಯ ಗುಣಗಳು ಇಲ್ಲಿ ವ್ಯಕ್ತ. ವಾಸ್ತವವಾಗಿ ನಾನು ಹಳಗನ್ನಡ ಗದ್ಯ ಸಂರಚನೆ, ಬಿಡಿಸುವುದು ಡಿಎಲ್‌ಎನ್ ರಿಂದ ಕಲಿತೆ. ಎಸ್. ಶ್ರೀಕಂಠಶಾಸ್ತ್ರೀ ಗಳಿಂದ ಸಾಂಸ್ಕೃತಿಕ ಇತಿಹಾಸ ಕಲಿತೆವು. ಇವರು ಸಂಗೀತ ಚಿತ್ರ ಮುಂತಾದವುಗಳ ಆಸಕ್ತಿ ಮೂಡಿಸಿದರು, ತೀನಂಶ್ರೀ ಭಾಷಾಶಾಸ್ತ್ರ, ಹೀಗೆ ವಿವಿಧ ರೀತಿಯ ಪ್ರಭಾವದಿಂದ ನಾನು ನಾನಾಗಿದ್ದೇನೆ. ಕುವೆಂಪು ನನ್ನ ಲೇಖನ ಓದಿ ಹೇಳಿದಾಗ ಪ್ರಬುದ್ಧಕರ್ನಾಟಕದಲ್ಲಿ ಹಾಕಿಸಿದರು. ನಾವೆಲ್ಲ ಒಳ್ಳೆಪರಿಸರದಿಂದ ಬಂದವರು. ನಾನಂತೂ ಸಂಕೋಚದ ಪ್ರವೃತ್ತಿಯವನು. ಭಾಷಾವಿಜ್ಞಾನದ ಬಗ್ಗೆ ೧೯೫೮ರಲ್ಲಿ ಕಾರ್ಯಾಗಾರ, ನವ್ಯಕ್ಕೆ ಸಂಬಂಧಿಸಿದ ಚರ್ಚೆ. ಗೆಳೆಯ ಕೆ.ಎಸ್. ಕರುಣಾಕರ ರಕ್ತಬೀಜಾಸುರ ಎಂಬ ಕವನ ತಿಗಣೆ ಮೇಲೆ ಬರೆದಿದ್ದ. ಅಂದು ನಮಗೆ ತಲೆ ಬುಡ ಅರ್ಥವಾಗಿರಲಿಲ್ಲ. "ವಡ್ಡಾರಾಧನೆಗೆ ಪೀಠಿಕೆ ಬರೆದಿಲ್ಲ ಸಾರ್ ಎಂದಾಗ, ಇದನ್ನೇ ತಲಹರಟೆ ಎನ್ನೋದು ಕೂತ್ಕೋ" ಎಂದಿದ್ದರು. ಹಿಸ್ಟಾರಿಕಲ್ ಫಾರಂ ತಮಗೇ ಹಾಕಿಕೊಂಡಿದ್ದ ಅವರು ನಾಲ್ಕು ತಿಂಗಳಾದರೂ ತರಗತಿ ತೆಗೆದುಕೊಂಡಿರಲಿಲ್ಲ. ಒಂದು ದಿನ ತರಗತಿಗೆ ಬಂದು ಹೇಳುತ್ತಾ ಹೋದರು. ಅದು ಇವತ್ತಿಗೂ ಅದ್ಭುತವಿಶ್ಲೇಷಣೆಯಾಗಿದೆ. ಇವರದು 'ಅಭಿಜಾತ ಮನೋಧರ್ಮ', ಬೇಸಿಗೆ ವರ್ಣನೆಗೆ ಇಷ್ಟುದ್ದ ಪೀಠಿಕೆ ಬೇಕೆ ಎಂದು ಹೇಳಿದವರು. ಟುಟೋರಿಯಲ್ ತರಗತಿ ಆಗತಾನೆ ಆರಂಭ, ವರ್ಷದ ಕೊನೆ ವಿದ್ಯಾರ್ಥಿಗಳಿಗೆಲ್ಲ ಮನೆಗೆ ಕರೆದು ಊಟ ಹಾಕುವ ಪದ್ಧತಿ, ಡಿಎಲ್‌ಎನ್ ಮನೆಗೆ ಕರೆಯದೆ ಹೋಟಲಿನಲ್ಲಿಯೋ, ಅನಂತರಂಗಾಚಾರ್ಯರಿಂದ ಪುಳಿಯೋಗರೆ ಮಾಡಿಸಿಯೋ ಕೊಡುತ್ತಿದ್ದರು. ಹಿಮವದ್ಗೋಪಾಲಸ್ವಾಮಿ ಬೆಟ್ಟದಲ್ಲಿ ಅಂತ್ಯಾಕ್ಷರಿ ಸ್ಪರ್ಧೆ ಏರ್ಪಡಿಸಿ ತೀನಂಶ್ರೀ ಗುಂಪು ಮತ್ತು ಡಿಎಲ್‌ಎನ್ ಗುಂಪಿಗೂ ಸ್ಪರ್ಧೆ, ಯಾವುದೇ ಅಕ್ಷರದಿಂದ ಕೊನೆಗೊಂಡರೂ ಹಳಗನ್ನಡದ ಕಾವ್ಯಗಳನ್ನು ಹೇಳುತ್ತಾ ಗೆದ್ದೇಬಿಟ್ಟರು.

ಬಡಹುಡುಗರಿಗೆ ದುಡ್ಡುಕೊಟ್ಟು ಸಹಾಯ ಮಾಡುತ್ತಿದ್ದರು. ಅದನ್ನು ದುರುಪಯೋಗ ಪಡಿಸಿಕೊಂಡವರೂ ಇದ್ದಾರೆ. 'ಏನಯ್ಯ ಎಷ್ಟುಬೇಕು? ಯಾತಕ್ಕೆ? ಸಿಗರೇಟಿಗೋ? ಎನ್ನುತ್ತಲೇ

ನೀಡುತ್ತಿದ್ದರು.' ನನ್ನ ಬರವಣಿಗೆ ಕಡಿಮೆಯಾಗಲಿಕ್ಕೆ ಅವರೇ ಕಾರಣ, ಒಮ್ಮೆ ಪರೀಕ್ಷೆಯಲ್ಲಿ ರನ್ನನ ಬಗ್ಗೆ ಕೊಟ್ಟಿದ್ದಾಗ ಅತ್ತಿಮಬ್ಬೆಯ ಮಗನ ಬಗ್ಗೆ ಬರೆದಿದ್ದೆ. ಮಹಾರಾಜಾ ಕಾಲೇಜಿನ ಮಹಡಿಹತ್ತುವಾಗ ಡಿಎಲ್‌ಎನ್ ಬಂದರು. ಅವರಿಗೆ ದಾರಿಕೊಟ್ಟು ನಿಂತೆ. ಅವರು ಮುಂದೆ ಹೋದವರೆ ತಿರುಗುವಲ್ಲಿ ಒಮ್ಮೆ ನಿಂತು ಕೃಷ್ಣಯ್ಯ ಎಂದರು. ನೀನು ಅತ್ತಿಮಬ್ಬೆಯ ಮಗನ ಹೆಸರು ಏನೋ ಬರೆದಿದ್ದೀಯಲ್ಲ, ಎಲ್ಲಿ ಸಿಕ್ತು ಆಧಾರ? ಯಾವಶಾಸನ? ನೋಡು ಹೀಗೆಲ್ಲ ಬಂಕಂ ಜಿಡಬಾರದು ಎಂದರು. ಅಂದಿನಿಂದ ನಾನು ಬರೆವ ವಾಕ್ಯ ಪದ ಎಷ್ಟುಮುಖ್ಯ ಎಂಬುದು ತಿಳಿಯಿತು. ತೂಕದಿಂದ ಬರೆಯಬೇಕಾಗುತ್ತದೆ, ಅನಗತ್ಯ ಬಿಡಬೇಕು ಎಂಬುದು ತಿಳಿದೆ. ಇದರಿಂದ ಒಳ್ಳೆಯದೇ ಆಯಿತು, ಹೇಳಬೇಕು ಎನಿಸಿದರೆ ಮಾತ್ರ ಬರೀಬೇಕು. ಇಂದಿನವರೆಗೂ ಅದನ್ನು ಪಾಲಿಸಿಕೊಂಡು ಬಂದಿದ್ದೇನೆ. ಇದರಿಂದಲೇ ಅವರ ವ್ಯಕ್ತಿತ್ವದ ಕಲ್ಪನೆ ಬರುತ್ತದೆ. ಆನರ್ಸ್‌ನಲ್ಲಿ ಸಂಸ್ಕೃತ, ವ್ಯಾಕರಣ, ನಾಟಕ, ಪದ್ಯ, ಗದ್ಯ, ಓದಬೇಕು, ನಮಗೆ ಸ್ವಪ್ನವಾಸವದತ್ತ ನಾಟಕ ಇತ್ತು. ಲಕ್ಷ್ಮೀನಾರಾಯಣ ಮುಂತಾದವರು ಎಲ್ಲವನ್ನು ಕರಗತಮಾಡಿಕೊಂಡಿದ್ದಾರೆ, ನನಗೋ ಭಯ, ರಾತ್ರಿಯೆಲ್ಲಾ ಓದಿದ್ದೇನೆ. ಒಂದೂ ನೆನಪಿಗೆ ಬರುತ್ತಿಲ್ಲ. ಭಯವಾಯ್ತು. ಡಿಎಲ್‌ಎನ್ ಬಳಿಹೋಗಿ ನನ್ನ ಕಷ್ಟ ಹೇಳಿಕೊಂಡು ಪರೀಕ್ಷೆ ವಿತ್‌ಡ್ರಾ ಮಾಡಿಕೊಳ್ಳೋಣ ಅನ್ನಿಸ್ತು. ಅವರ ಮನೆಕಡೆ ಹೋಗ್ತಾ ಇದ್ದೆ. ಎದುರಿಂದ ನನ್ನ ಕ್ಲಾಸ್ಮೇಟ್ ಬರುತ್ತಿದ್ದರು. ಅವರು ದುಃಖದಲ್ಲಿದ್ದಂತೆ ಕಂಡಿತು, ಕೇಳಿದೆ, ಅವರು ಇದೇ ವಿಷಯಕ್ಕೆ ಡಿಎಲ್‌ಎನ್ ಬಳಿ ಹೋಗಿದ್ದರಂತೆ, ಅವರು ರೇಗಿದ್ದರು. ನಾನು ಆ ಕಡೆ ಹೋಗದೆ ಪರೀಕ್ಷೆ ಬರೆಯಲು ಹಿಂತಿರುಗಿದೆ. ಮೊದಲ ಪ್ರಶ್ನೆ ನೋಡಿದ್ದೇ ತಾನೇತಾನಾಗಿ ಬರೆಯುತ್ತಾ ಹೋದೆ. ೭೦ ಅಂಕಗಳನ್ನು ಗಳಿಸಿದ್ದೆ. ನಮ್ಮ ಕೆಲ ಸ್ನೇಹಿತರು ಹಳಗನ್ನಡದಲ್ಲಿಯೇ ಸಂಭಾಷಣೆಮಾಡುತ್ತಿದ್ದರು. ಏಂಗಡ! ಬಾತ್ ರೂಮಿನಲ್ಲಿ ಮೀನ್ಗಳ್ ಇರ್ಪವೇಏಡಿಗಳಿರ್ಪವೇ? ಮನುಷ್ಯರಿರ್ಪರೆ? ಏನ್ ಬರ್ಪೆಯೋ? ಈ ರೀತಿ ಬಿಡಿಸಿ ಮಾತಾಡುವುದನ್ನು ಕಲಿಸಿದರು. ಇವತ್ತು ನಾವೇನಾಗಿದ್ದೇವೆಯೋ ಅವರಿಂದ ಆಗಿದ್ದೇವೆ. ಈ ಗುರುಗಳನ್ನು ನಾವಿರುವವರೆಗೂ ಮರೆಯಲು ಸಾಧ್ಯವಿಲ್ಲ. ಹಾಗೆ ತರಗತಿಯಲ್ಲಿ ಹೇಳುವುದರಿಂದ ತಲೆಮಾರಿನಿಂದ ತಲೆಮಾರಿಗೆ ಮುಂದುವರೆಯುತ್ತಲೆ ಹೋಗುತ್ತದೆ.

**ಅಧ್ಯಕ್ಷೀಯ ಭಾಷಣ : ಡಾ. ಕಮಲಾ ಹಂಪನಾ :**

ಒಬ್ಬೊಬ್ಬರೂ ಹೃದಯದ ಮಾತುಗಳನ್ನು ಹಂಚಿಕೊಂಡಿದ್ದಾರೆ, ಹಿಮವದ್ಗೋಪಾಲಸ್ವಾಮಿ ಬೆಟ್ಟದಲ್ಲಿ ತೀನಂಶ್ರೀ, ಡಿಎಲ್‌ಎನ್‌ರ ಸಂಭಾಷಣೆ ಎಲ್ಲವೂ ಇಂದಿಗೂ ಅಚ್ಚೊತ್ತಿದಹಾಗೆ ನಿಲ್ಲುತ್ತೆ. 'ಬಾರೆ ಗೋಪಿ' ಎಂಬ ಹಾಡಿನಲ್ಲಿ ದಶಾವತಾರದ ವಿಶ್ಲೇಷಣೆಯನ್ನು ತೀನಂಶ್ರೀ ಹೇಳುತ್ತಿದ್ದರು. ಒಂದು ದೊಡ್ಡ ಗುರುಪರಂಪರೆ ಎಷ್ಟು ಎತ್ತರದವ್ಯಕ್ತಿಗಳು, ಅವರನೋಡೋದು, ಪಾಠಕೇಳೋದು ನಮ್ಮ ಸೌಭಾಗ್ಯ ಆಗಿತ್ತು. ಡಿಎಲ್‌ಎನ್ ರಿಂದ ಒಂದು ಪದ ಎಷ್ಟು ತೂಕದಿಂದ ಬಳಸಬೇಕು, ಬರವಣಿಗೆಯಲ್ಲಿ ಗಟ್ಟಿತನ, ಮೌಲಿಕತೆ, ಹಳಗನ್ನಡ ಸಂಪಾದನೆ, ಕಾವ್ಯವಿಹಾರ, ಹೇಗೆ ನಾನಾ ಆಯಾಮಗಳಿಂದ ಕವಿಜೊತೆ ವಿಹಾರ ಮಾಡಬೇಕು, ಅರ್ಥ ಮಾಡಿಕೊಳ್ಳುವ ಅರ್ಥಮಾಡಿಸುವ ರೀತಿ'. ತೀ.ನಂಶ್ರೀ ಸು. ಶಾಮರಾಯ 'ಕಾವ್ಯಲೋಕದಲ್ಲಿ ಮೈಮರೆಯುವಂತೆ', ಶ್ರೀಕಂಠಶಾಸ್ತ್ರೀ ಗಳಿಂದ 'ಚರಿತ್ರೆ ಓದುವ ಪರಿಪಾಠ' ಹೀಗೆ ಎಷ್ಟೋ

ಜನ ಗುರುಗಳ ಋಣಭಾರ ನನ್ನ ಮೇಲೆ ಇದೆ. ಇದನ್ನು ಹೇಗೆ ತೀರಿಸುವುದೋ ತಿಳಿಯದು. ಇಷ್ಟೇ ಹೇಳಿದರೆ ಅವರ ವ್ಯಕ್ತಿತ್ವ ಹೇಳಲು ಸಾಧ್ಯವಿಲ್ಲ. ಜೀವನಮಾರ್ಗಕ್ಕೆ ಕೊಂಡೊಯ್ದು ಮೌಲಿಕ ಗುಣ ಪಡೆದೆವು. ಜೀವನ ಪಾಠಗಳನ್ನು ಕಲಿತೆವು. ಆನರ್ಸ್‌ಗೆ ಸೇರುವವರು ಎರಡು ಕೊಂಬು ಇಟ್ಟುಕೊಂಡವರಂತೆ ಪಾಸ್ ಆಗಲೇ ಬೇಕು. ಆನರ್ಸ್ ಎನ್ನುವ ಭಯ ಫೇಲಾಗುವಂತೆ, ಇಲ್ಲ ಸಮಯ ಸಿಕ್ಕಾಗಲೆಲ್ಲ ಓದುವುದು. ಡಿಎಲ್‌ಎನ್ ಮೂಲಕ ಲೈಬ್ರರಿಯಲ್ಲಿ ಪುಸ್ತಕ ಸಿಗುವಂತಾಯಿತು. ಅವರ ಮನೆಗೆ ಅವರ ಮಕ್ಕಳ ಮೂಲಕ ಪ್ರವೇಶದೊರೆಯಿತು. 'ವಡ್ಡಾರಾಧನೆ ಮುನ್ನುಡಿ ಬರಿಬಹುದಿತ್ತು, ಆದರೆ ಉಪಾಧ್ಯೆ ಗಂಟುಹಾಕಿಟ್ಟಿದ್ದಾರೆ' ಎಂದು ಹೇಳುತ್ತಿದ್ದರು. ಸುಕುಮಾರ ಚರಿತೆ, ಫಾಲ್ಸ್ ಆಫ್ ಟೂ ಸಿಟೀಸ್, ತೌಲನಿಕ ಅಭ್ಯಾಸ, ಶಾಂತಿನಾಥ ಹೇಗೆ ಚಂಪೂಕೃತಿಯನ್ನು ವಿಸ್ತರಿಸಿದ ಎಂಬುದನ್ನು ಆಳಕ್ಕೆ ಇಳಿದು ತೋರಿಸುತ್ತಿದ್ದರು. ನನಗೆ ವೈವಾ ದಲ್ಲಿ ಕೂಡ 'ಇಸಿಲ' ಬಗ್ಗೆ ಕೇಳಲಾಗಿತ್ತು.

ನಾಡು ನುಡಿ ಭಾಷೆ ಇದರ ಬಗ್ಗೆ ನಾವು ಕೆಲಸಮಾಡಲು ಕುವೆಂಪು ಜವರೆಗೌಡ ಮೊದಲಾದವರು ಕಾರಣ. ಆದಿನಾಥ ನೇಮಿನಾಥ ಉಪಾಧ್ಯೆ ಅವರ ಪರಿಚಯಮಾಡಿ ಕೊಡುವಾಗ ಡಿಎಲ್‌ಎನ್ ವಿದ್ವತ್ ಸಭೆಯಲ್ಲಿ ಇವರು ಆನೆ ಎಂದಾಗ ಉಪಾಧ್ಯೆ ಅವರು ಇಂಗ್ಲೀಷಿನಲ್ಲಿ ಅಣು ಎಂದಾಗುತ್ತೆ. ನಾನು ವಿದ್ವತ್ ಲೋಕದಲ್ಲಿ ಅಣು ಎಂದಾಗ ಇಡೀ ಸಭೆಯೇ ರೋಮಾಂಚನಗೊಂಡು ಕರತಾಡನ ಮಾಡಿತು. ಈ ಎರಡು ಆನೆಗಳ ಬಗ್ಗೆ ನಮ್ಮ ಮನಸ್ಸಿನಲ್ಲಿ ವಿದ್ವತ್ ಗೌರವಮೂಡಿತ್ತು. ನನಗೆ ಕೆಲಸ ಸಿಕ್ಕಿದೆ ಎಂದು ತೀನಂಶ್ರೀ ಅವರ ಬಳಿ ಹೇಳಿದಾಗ ಅವರು ಸಿದ್ಧತೆ ಮಾಡಿಕೊಳ್ಳದೆ ತರಗತಿಗೆ ಹೋಗಬೇಡಿ ಎಂದು ಹೇಳಿದರು. ಡಿಎಲ್‌ಎನ್ ಹೋಗಿ ಏನಾದರೂ ಮಾಡು ಇನ್ನೊಬ್ಬರ ಹಾಗೆ ಆಗಬೇಡ. ಪಂಪನ ಎರಡು ಕೃತಿಗಳನ್ನು ಓದಿ ಅರ್ಥಮಾಡಿಕೊಂಡರೆ ಸಾಕು, ಇಡೀ ಸಾಹಿತ್ಯದ ಗುಟ್ಟು, ರಹಸ್ಯ, ಮಹತ್ವ, ನಿಮ್ಮ ಬೆರಳತುದಿಯಲ್ಲಿರುತ್ತದೆ ಎಂದು ಹೇಳಿದರು. ಸುಕುಮಾರಚರಿತೆ ಸಂಗ್ರಹಮಾಡಿದ್ದನ್ನು ಕಂಡು ಸಂತೋಷಪಟ್ಟರು. ೧೯೬೪ರಲ್ಲಿ ಪ್ರಕಟವಾಯಿತು. ಬೆಂಗಳೂರು ವಿಶ್ವವಿದ್ಯಾಲಯ ಪಠ್ಯವನ್ನಾಗಿ ಮಾಡಿತು. ಅವರ ಆಶೀರ್ವಾದ ನಮ್ಮನ್ನು ಈ ಕ್ಷೇತ್ರಕ್ಕೆ ಕರತಂದಿದೆ. ಅವರ ಋಣಭಾರದಿಂದ ನಾವೆಲ್ಲ ಬೆಳೆದಿದ್ದೇವೆ. ೧೯೬೦ರಲ್ಲಿ ಪ್ರಮುಖ ಲೇಖಕರ ಪತ್ನಿಯರನ್ನು ಸಂದರ್ಶನಲೇಖನಮಾಲೆ ಮಾಡುವಾಗ ಡಿಎಲ್‌ಎನ್ ಪತ್ನಿ ಬಗ್ಗೆ ಸಂಸಾರದ ಎಲ್ಲ ಭಾರ ಆಕೆ ಹೊತ್ತುಕೊಂಡಿದ್ದಾಳೆ, ನಾನು ಬೇರೆಯದನ್ನು ಹೊತ್ತುಕೊಂಡಿದ್ದೇನೆ ಎಂದು ಹೇಳಿದರು. ಬೆಳಗಾಗ ನಾವೆದ್ದು ಯಾರ್ಯಾರ ನೆನೆಯಾಲಿ.... ಎಂಬಂತೆ ಬೆಳಗ್ಗೆ ಈ ಮಹನೀಯರನ್ನು ನೆನೆಯುತ್ತೇನೆ. ಅವರು ತೀರಿಕೊಂಡಾಗ ಮಸಣಕ್ಕೆ ಹೋಗಿ ಅವರ ಅಂತಿಮ ದರ್ಶನ ಪಡೆದೆ. ಅವರ ಕೈಗೆ ನಮಸ್ಕರಿಸಿದೆ. ಎಂತಹ ವಿದ್ವತ್ ಬರಹ ಬರೆದ ಕೈ, ವಿದ್ವತ್ ಹೊಂದಿದ ತಲೆ ಅವರದು ಎಂದು ಅವರಿಗೆ ನಮಸ್ಕರಿಸಿದೆ. ಅಲ್ಲಿ ಕೂಡ ಅವರು ಆಶೀರ್ವದಿಸಿದರು. ಅವರಿಲ್ಲದೆ ಶೂನ್ಯಕಾಡಿತ್ತು.

## ಗೋಷ್ಠಿ –೨

**ಪ್ರೊ. ಬಿ.ವಿ. ವೈಕುಂಠರಾಜು :**

ನನ್ನ ಗುರು ದೊಡ್ಡವರು. ಅವರು ಹೆಸರಿನಲ್ಲಿ ಪೀಠವಾಗಬೇಕು. ನನಗೆ ಹೊರದೇಶಕ್ಕೆ ಹೋಗಬೇಕೆಂಬ ಆಸೆ ಇತ್ತು. ಅವರಲ್ಲಿ ಹೇಳಿದೆ ಅವಕಾಶ ಸಿಕ್ಕಿದೆ ಅಂತ, ಅವರು 'ಇಲ್ಲಿ ಏನೂ ಕೆಲಸ ಇಲ್ಲ ಅಂದ್ರೆ ನೀನು ಹೋಗು, ನಿನ್ನ ಚಾರ್ಜಿಗೆ ಹಣ ಇಲ್ಲ ಎಂದು ಚಿಂತೆ ಮಾಡಬೇಡ, ಎಂದರು, ಕರ್ನಾಟಕದಲ್ಲಿ ಉತ್ಖನನಕ್ಕೆ ಬಹಳಷ್ಟು ಅವಕಾಶವಿದೆ.' ಅಂದೇ ಬೇರೆದೇಶಕ್ಕೆ ಹೋಗೋಲ್ಲ ಎಂದು ಹೇಳಿದೆ, ಹಲವಾರು ಅವಕಾಶಗಳು ಹುಡುಕಿಕೊಂಡು ಬಂದರೂ ನಾನು ಹೋಗಿಲ್ಲ.

ಜಾತೀಯತೆ ತುಂಬಿತುಳುಕುತ್ತಿದ್ದ ಕಾಲ ಅದು. ಆಗ 'ಸರಸ್ವತೀರಾಜ್ಯದಲ್ಲಿ ಜಾತೀಯತೆಗೆ, ಮತೀಯತೆಗೆ ಅವಕಾಶವಿಲ್ಲ' ಎಂದು ಹೇಳಿದವರು ಅವರು; ಬಹಳ ನಿಷ್ಠುರವ್ಯಕ್ತಿ. "ವಿದ್ವತ್ ಮಧ್ಯೆ, ಸಂಶೋಧನೆ ಮಧ್ಯೆ ಜಾತಿಯತೆ ಏಕೆ ಎಂದು ಕೇಳಿದವರು." ದಿನಾ ಬೆಳಗ್ಗೆ ನಶ್ಯಾತೆಗೆದುಕೊಳ್ಳಲು ಅಂಗಡಿಗೆ ಬರುತ್ತಿದ್ದರು, ಹಾಗೆ ನನ್ನನ್ನು ತಿಂಡಿಗೆ ಕರೆದುಕೊಂಡು ಹೋಗುತ್ತಿದ್ದರು. ಶಿಷ್ಯವಾತ್ಸಲ್ಯ ಏಳುಜನ್ಮ ಹುಟ್ಟಿದರೂ ಅವರ ವಾತ್ಸಲ್ಯದ ಋಣ ತೀರಿಸಲು ಆಗಲ್ಲ. ಮನುಷ್ಯ ಹೇಗೆ ಬಾಳಬೇಕು ಎಂಬುದನ್ನು ನನಗೆ ಕಲಿಸಿಕೊಟ್ಟವರು. ನನ್ನ ಗುರುಗಳನ್ನು ಕೊಂದದ್ದು ನಿಘಂಟುವಿನ ಕೆಲಸ; ಹಗಲು ರಾತ್ರಿ ವಿಶ್ರಾಂತಿ ಇಲ್ಲದೆ ಕೆಲಸ ಮಾಡಿದರು. ತಮ್ಮ ನೋವನ್ನು ಯಾರಲ್ಲಿಯೂ ಹೇಳಿಕೊಳ್ಳುತ್ತಿರಲಿಲ್ಲ. (ಗದ್ಗದಿತರಾಗಿ ಮಾತು ಮುಂದುವರೆಸಲಿಲ್ಲ).

**ಡಾ. ಹಂಪನಾ :**

ಡಿಎಲ್ಎನ್ ರ ಸ್ಮಾರಕದ ಮೇಲೆ ಬರೆಸಬೇಕು .......ಹಿ ವಾಂಟ್ ಟು ಫಿನಿಷ್ ದ ಡಿಕ್ಷನರಿ ಡಿಕ್ಷನರಿಫಿನಿಷ್ಡ್ ಹಿಮ್, "ಡೆತ್ ವಾಸ್ ದ ರಿವಾರ್ಡ್ ಗಿವನ್ ಟು ಎ ಹಾರ್ಡ್‌ಲೇಬರ್".

ಡಿಎಲ್ಎನ್ ನಿಘಂಟು ಕೆಲಸ ಮುಗಿಸಲು ಇಷ್ಟಪಟ್ಟರು. ಅದೇ ಅವರನ್ನು ಮುಗಿಸಿತು. ಅವರ ಬರಹ, ವ್ಯಕ್ತಿತ್ವದ ಮುಂದೆ ನಿಂತಾಗ 'ಪರ್ವತದ ತಪ್ಪಲಲ್ಲಿ ಸಾಗರದ ತಟದಲ್ಲಿ ನಿಂತಹಾಗೆ ಭಾಸವಾಗುತ್ತದೆ.' ತಂದೆಮಗನಿಗೆ ಹೇಳಿದಂತೆ ನನ್ನ ಬದುಕಿಗೆ ತೋರಿದ ಬುನಾದಿ, ನೀಡಿದ ಮಾರ್ಗದರ್ಶನ ಕೃತಜ್ಞತೆಯಿಂದ ಸ್ಮರಿಸುತ್ತೇನೆ. ಮಿತಭಾಷಿ ಪಂಪ ಎಂಬ ಲೇಖನ ಬರೆದಿದ್ದೆ, ಜಿ. ಬ್ರಹ್ಮಪ್ಪನವರು ತರಗತಿಯಲ್ಲಿ ಛಂದಸ್ಸು ನೆನಪಿಟ್ಟುಕೊಳ್ಳಲು ಸುಲಭವಾಗಲೆಂದು 'ಕುರಿಗೊಬ್ಬರತೋಟಕೆ ಜೀವರಸಂ' ಎಂದು ಬರೆದಿದ್ದು ತೋರಿದಾಗ ಅವರು ತರಗತಿಯಲ್ಲಿ ರೇಗಿಬಿಟ್ಟರು. ಸಮಾಧಾನವಾಗಿದ್ದಾಗ ತಿಳಿಸಿದಾಗ ತರಗತಿಯಲ್ಲಿ ಅದನ್ನು ಒಪ್ಪಿಕೊಂಡರು. ಅವರ ಔದಾರ್ಯ ಎಷ್ಟುದೊಡ್ಡದು ಎಂದು ಹೇಳಬಹುದು. ಅವರು ಹಳಗನ್ನಡ ಓದುವ ರೀತಿ, ಕವಿಭಾವ, ಲಯ ಎಲ್ಲ ಅರ್ಥವ್ಯಾಪ್ತಿ ಮಿಳಿತವಾಗಿ ಓದುತ್ತಿರುವಾಗಲೇ ದಾಖಲೆಯಾಗಬೇಕು ಎಂಬಂತೆ ಓದುತ್ತಿದ್ದರು. ಅಜಿತಪುರಾಣ ಪಾಠ ಇಂದಿಗೂ ಅದರ ಮೊದಲ ಪದ್ಯ ನೆನಪಿದೆ. ಅವರ ಪೀಠಿಕೆಗಳು ಮತ್ತು ಲೇಖನಗಳು ಪುಸ್ತಕದ ಮುನ್ನುಡಿ ಬರೆವ

ಮೊದಲೇ ತೀರಿಕೊಂಡರು, ಆ.ನೆ. ಉಪಾಧ್ಯೆ ಬರೆದರು. 'ಉಪಾಧ್ಯೆ ಪೇಪರ್ಸ್' ಹೊರಬರುವ ಮೊದಲೆ ಅವರು ತೀರಿಕೊಂಡಿದ್ದು' ಇಬ್ಬರಲ್ಲಿ ಇದ್ದ ಸಾಮ್ಯತೆ. ಆ.ನೆ. ಉಪಾಧ್ಯೆ ಸಮ್ಮೇಳನ ಅಧ್ಯಕ್ಷ್ಯರಾಗುತ್ತಾರೆಂದಾಗ ಅಪಸ್ವರ ಬಂದಾಗ ಉಪಾಧ್ಯೆಯವರ ಪಾಂಡಿತ್ಯ, ವ್ಯಕ್ತಿತ್ವ ಸ್ಥಾಪಿಸುವಂತಹ ಲೇಖನ ಬರೆದರು. ಅದು ಕನ್ನಡ ನುಡಿಯಲ್ಲಿ ಪ್ರಕಟವಾಯಿತು. 'ಮಾತುಗಳು ನಿಲ್ಲಬಹುದು ಅವರ ಸ್ಮರಣೆ ಚಿರಸ್ಥಾಯಿಯಾದುದು.'

**ಜಿ.ಕೆ. ಪರಶುರಾಮಯ್ಯ :**

ಕನ್ನಡಕ್ಕೆ ದೊಡ್ಡಬೆಲೆಕೊಟ್ಟಿರುವ ದೊಡ್ಡಬೆಲೆ ನರಸಿಂಹಾಚಾರ್ಯರು. ನನ್ನ ಊರು ಅವರಹುಟ್ಟೂರು ಒಂದೇ. ಅಂದಿನ ಗುರುಗಳು ವಿದ್ಯಾರ್ಥಿಗಳ ವಯಕ್ತಿಕ ವಿವರ ಆತ್ಮೀಯವಾಗಿ ಕೇಳುವಾಗ ನನ್ನ ಊರಿನ ಬಗ್ಗೆ ಹೇಳಿದೆ. ಆಗ 'ಶೆಟ್ಟಿಕೆರೆ ಗ್ರಾಮ ಪ್ರಾಚೀನ ವಿದ್ಯಾಕೇಂದ್ರವಾಗಿತ್ತು ಗೊತ್ತೋ? ಎಂದು ಹೇಳಿದರು. ಕಾಲಗರ್ಭದಲ್ಲಡಗಿದ ವಿಚಾರಗಳ ಹುಡುಕಿ ಹೊರತೆಗೆವ ವ್ಯಕ್ತಿ ಇವರು. ಪಂಪನ ಪದ್ಯ ಸುಲಭವಾಗಿ ಜೀರ್ಣವಾಗುವುದಿಲ್ಲ, ನಿಧಾನವಾಗಿ ಅಗಿದು ತಿನ್ನಬೇಕು' ಎಂದು ಹೇಳುತ್ತಿದ್ದರು. 'ದ್ರೌಪದಿಯಬಿಚ್ಚಿದಮುಡಿಯೇ ಮಹಾಭಾರತಕ್ಕೆ ಕಾರಣವಾಯಿತು' ಎಂಬ ವಿದ್ವತ್ಪೂರ್ಣ ವಿವರಣೆ ಅವರದು. ಎಲ್ಲವನ್ನು ಕಣ್ಣ ಮುಂದೆ ನಿಲ್ಲುವಂತೆ ಮಾಡುವ ವಿಶಿಷ್ಟ ಕಲೆ ಅವರದು. ಮೋಡದ ಮರೆಯ ಆರ್ಭಟವೆಂಬಂತೆ ಪ್ರಾಚೀನ ಕಾವ್ಯ ಓದುತ್ತಿದ್ದರು. ಒಮ್ಮೆ 'ಚಾಕಣ' ಎಂಬ ಪದ ಬಂದಾಗ ನಾನು ಅದು ತಯಾರಾಗುವ ಬಗೆಯನ್ನು ವಿವರಿಸಿದಾಗ ಹೌದು ಎಂದು ಒಪ್ಪಿದರು. ಚಕ್ಕಣ>ಚಾಕಣ (ಕಳ್ಗಿಚಕ್ಕಳ) ಮದ್ಯಪಾನ ಮಾಡುವವರು ಜೊತೆಯಲ್ಲಿ ತಿನ್ನುವ ಕಾರ ಹಚ್ಚಿ ಹುರಿದ ಮಾಂಸದ ಚೂರುಗಳು (ಈಗಲೂ ಸಾರಾಯಿ ಅಂಗಡಿಗಳ ಬಳಿ ಮಾಡುತ್ತಿರುತ್ತಾರೆ). ಒಂದು ಪದದ ಸಹಜ ಸ್ವರೂಪ ಹೊರಗೆಡುಹುವ ಹಾಗೆ ಪ್ರಯತ್ನಮಾಡುತ್ತಿದ್ದರೆ, ಓಡಾಡುವ ನಿಘಂಟು ಎಂದೇ ಎಲ್ಲರೂ ಕರೆಯುತ್ತಿದ್ದರು. ಪ್ರಾಚೀನ ಕೃತಿಗಳು ಹೊರಬರಬೇಕು ಎಂಬ ಕಳಕಳಿ ಅವರದಾಗಿತ್ತು. 'ತೊಂಡಗೂಳಿಹೊಟ್ಟೆತುಂಬುವ ಹಾಗೆ ಮೇಯುತ್ತೆ, ನಿಧಾನವಾಗಿ ಮೆಲುಕುಹಾಕುತ್ತೆ ಹಾಗೆ' ತಾದಾತ್ಮ್ಯತೆಯಿಂದ ಓದಿ ಟಿಪ್ಪಣಿ ಹಾಕಿಕೊಂಡು ಮನದಟ್ಟು ಮಾಡಿಕೊಳ್ಳಿ, ಆಗ ಅದು ನಿಮ್ಮದಾಗುತ್ತೆ, ನಿಘಂಟುಗಳನ್ನು ಓದಿರಿ, ಕ್ರಾಸ್ ವೆರಿಫಿಕೇಷನ್ ಮಾಡಿರಿ ಎಂದು ಹೇಳುತ್ತಿದ್ದರು. ಇದು ನನಗೆ ನನ್ನ ವೃತ್ತಿಜೀವನದಲ್ಲಿ ಭಾಷಾಂತರಕಾರ್ಯದಲ್ಲಿ ಬಹಳ ಸಹಕಾರಿಯಾಯಿತು. ಯಾವ ಕಾವ್ಯ ಕಾಲ ಕಳೆದಂತೆ ವಿಮರ್ಶೆ ಮಾಡುವಂತೆ ಮಾಡುತ್ತದೋ ಅದು ಮಹಾಕಾವ್ಯ ಎಂದು ಹೇಳುತ್ತಿದ್ದರು. ಬೀದರ್‌ನ ಸಮ್ಮೇಳನದ ಅಧ್ಯಕ್ಷರಾದಾಗ ನನಗೆ ಇಂದು ನನ್ನ ಮದುವೆಯ ದಿನ ನೆನಪಾಗುತ್ತಿದೆ ಎಂದು ಗದ್ಗದಿತರಾಗಿ ಹೇಳಿದರು. ಹಾಗೆಯೇ ಸರಸ್ವತೀ ಸಾಮ್ರಾಜ್ಯದಲ್ಲಿ ಜಾತೀಯತೆ ಸಲ್ಲದು ಎಂಬ ಸಂದೇಶ ನೀಡಿದರು. ಅಧ್ಯಯನ ಆಳವಾದ ಅಧ್ಯಯನವಾಗಬೇಕು, ಅಧ್ಯಾಪನ ಪ್ರಾಮಾಣಿಕ ಅಧ್ಯಾಪನವಾಗಬೇಕು, ಸಂಶೋಧನೆ ಆಳವಾದ ಸಂಶೋಧನೆಯಾಗಬೇಕು. ಹೀಗೆ ಮಾತನಾಡಲು ಅವರ ಪ್ರಭಾವವೇ ಕಾರಣ ಇವರುಗಳ ಕೃಪೆ ಶ್ರೀರಕ್ಷೆಯಾಯಿತು.

**ಅಧ್ಯಯಕ್ಷೀಯ ಭಾಷಣ : ಪ್ರೊ . ಎನ್. ಬಸವಾರಾಧ್ಯರು :**

ದೊಲನರವರು ವಿದ್ಯಾದಾನ, ಅನ್ನದಾನ ಮಾಡಿದವರು. ಪುಣ್ಯ ವಿಶೇಷದಿಂದ ಈ ಎಲ್ಲ ಗುರುಗಳು ಅವರು ಮಾಡಿದ್ದನ್ನು ಸ್ಮರಿಸಿ ನಾವು ಮಾಡಬೇಕಾದುದೇನು ಎಂಬುದನ್ನು ತಿಳಿಯಬೇಕು, ಡಿಎಲ್ಎನ್ ರಿಗೆ ಸಮಯ ಪ್ರಧಾನವಲ್ಲ, ವಿಷಯಪ್ರಧಾನ. ವಿದ್ಯಾರ್ಥಿಗಳ ವಯಕ್ತಿಕ ಸಮಸ್ಯೆಗಳಿಗೆ ಸ್ಪಂದಿಸಿದವರಲ್ಲಿ ಅತ್ಯಂತ ವಿರಳ. ಅನೇಕರನ್ನು ರೂಪಿಸಿದವರೂ ಛಾಪಿಸಿದವರೂ ಇವರು. ಶಿಷ್ಯರ ಯೋಗ್ಯತೆ, ಅರ್ಹತೆ, ಪ್ರತಿಭೆಗಳನ್ನು ತಿಳಿದು ಅವರಿಗೆ ಆ ದಿಸೆಯಲ್ಲಿ ಮಾರ್ಗದರ್ಶನ ಮಾಡುತ್ತಿದ್ದರು. ಕನ್ನಡ ಸಾಹಿತ್ಯದ ವಿಶ್ವರೂಪದರ್ಶನ ಮಾಡಿಕೊಟ್ಟ ಮಹಾನುಭಾವ, "ಗೊತ್ತಿದ್ರೆ ಗೊತ್ತಿದೆ ಎಂದು ಹೇಳು ಗಫ ಮಾತ್ರ ಎಂದೂ ಹೊಡಿಬೇಡ" ಎಂದು ಹೇಳುತ್ತಿದ್ದರು. 'ಒಮ್ಮೆ ಅವರ ಮನೆಯಲ್ಲಿ ಊಟಕ್ಕೆ ಅವರ ಜೊತೆಯಲ್ಲಿಯೇ ಕುಳ್ಳಿರಿಸಿಕೊಂಡು ಬೂದುಗುಂಬಳಕಾಯಿ ಹುಳಿ ತಿನ್ನಿಸಿದ್ದರು. ಇದುವರೆಗೆ ಅಂತಹ ಊಟಮತ್ತೆ ಮಾಡಿಲ್ಲ." ಅವರ ಶಿಷ್ಯವಾತ್ಸಲ್ಯ ಅಂತಹುದು. ಈ ಸಂಸ್ಮರಣೆ ಶಾಶ್ವತವಾಗಿರಬೇಕಾದರೆ 'ಡಿಎಲ್ಎನ್ ರ ಶಿಷ್ಯರು ಅವರ ಅನುಭವಗಳನ್ನು ಬಿಎಂಶ್ರೀ ಪ್ರತಿಷ್ಠಾನಕ್ಕೋ, ಹಂಪಿ ವಿಶ್ವವಿದ್ಯಾಲಯಕ್ಕೋ ಕಳಿಸಿಕೊಡಿ' ಪ್ರಕಟವಾಗಲಿ. ಈ ವರ್ಷದಲ್ಲಿ ಹಂಪಿಯಲ್ಲಿ ಒಂದು ಪೀಠವನ್ನು ಸ್ಥಾಪಿಸಬೇಕು, ಅವರ ಕಾರ್ಯ ಸಾರ್ಥಕವಾಗಿ ಎಲ್ಲರನ್ನು ಮುಟ್ಟುವಂತೆ ನೀವು ಮಾಡಬೇಕು. ಇವೆಲ್ಲ ಪೂರ್ವಜನ್ಮಪುಣ್ಯದಿಂದ ಪಡೆದದ್ದು. ಆ ಕೆಲಸ ಮಾಡುವುದು ಒಳ್ಳೆಯದು. ಪ್ರಶಸ್ತಿಗಳನ್ನು ನಿರ್ಲಕ್ಷಿಸಿ ವಿದ್ಯಾದಾನಮಾಡಿದ ಮಹಾನುಭಾವರಂತೆ ನಾವೂ ಒದಗಿಸಿಕೊಟ್ಟು ಕೆಲಸ ಮಾಡಬೇಕು.

**ಡಾ. ಎಂ. ಚಿದಾನಂದಮೂರ್ತಿ :**

ಕಾರ್ಯಕ್ರಮದ ಆರಂಭ ಮತ್ತು ಮುಕ್ತಾಯ ಒಂದು ಪುಸ್ತಕದ ರಕ್ಷಾಕವಚವಿದ್ದಂತೆ, ಇವೆರಡರ ಮಧ್ಯೆ ಇರುವ ಹೂರಣ ಇವೆರಡು ಹೇಗಿದೆ ಎಂಬುದರ ಮೇಲೆ ನಿಂತಿದೆ. ಸಂಶೋಧಕರು ತಾವು ಮಾಡಿದ ತಪ್ಪನ್ನು ತೋರಿಸಿದಾಗ ಸಂತೋಷಗೊಳ್ಳುತ್ತಾರೆ. ಇದಕ್ಕೆ ಡಿಎಲ್ಎನ್ ನಮಗೆ ಸ್ಫೂರ್ತಿ. ಶಾಸನಪ್ರಪಂಚಕ್ಕೆ ನನ್ನನ್ನು ಎಸೆದರು. ಯಾರೇ ವಿರೋಧಿಸಿದರೂ ಎದುರಿಸಿ ನಿಲ್ಲುವ ಧೈರ್ಯ ಆಧಾರಪೂರ್ವಕವಾಗಿ ಹೇಳುವ ಮನೋಭಾವ ಅವರಿಂದ ಬಂದಿತು. ನಾ ಹೇಳಿದ್ದು ಸರಿಯಲ್ಲ ಎಂದಾಗ, 'ಸತ್ಯವನ್ನು ಒಪ್ಪಿಕೊಳ್ಳುವ ಮನೋಭಾವ'. ಸಂಶೋಧನೆ ಎಂದರೇನು ಎಂಬುದು ತಿಳಿದಿದ್ದೇ ಅವರ ಕೃತಿಗಳನ್ನು ಓದಿದಾಗ ಮತ್ತು ಅವರೊಡನೆ ಚರ್ಚಿಸಿದ್ದರಿಂದ. 'ಇಸಿಲ ಕನ್ನಡ ಪದ ಕ್ರಿಸ್ತಪೂರ್ವದಲ್ಲಿ ಇತ್ತು ಎನ್ನುವ ಸಂಶೋಧನೆ ಅವರದಾಗಿತ್ತು'. ತಮ್ಮ ಸಂಶೋಧನಾ ಪತ್ರಿಕೆಗಳು ವಿದ್ವತ್ ಪತ್ರಿಕೆಗಳಲ್ಲಿ ಪ್ರಕಟವಾಗಬೇಕು ಎಂಬುದು ಮುಖ್ಯ.

ಎಷ್ಟು ಅರ್ಹ ಲೇಖನ ಉಲ್ಲೇಖಗೊಂಡಿದೆ ಎಂಬುದು ಮುಖ್ಯ. ಇಂದು ಪಾರಿಭಾಷಿಕ ಪದಗಳ ಬಗ್ಗೆ ಚರ್ಚಿಸಬೇಕಾಗಿದೆ. ಪಾರಿಭಾಷಿಕಪದಗಳನ್ನು ರೂಪಿಸಬೇಕಾಗಿದೆ. ವೈಜ್ಞಾನಿಕ ಸಾಹಿತ್ಯ ಬೆಳೆಯಬೇಕಾಗಿದೆ. ವಚನವಾಙ್ಮಯದಲ್ಲಿ ಹೊಸಕ್ಷೇತ್ರಗಳಿವೆ. "ಸಂಶೋಧನೆ ಎಂದರೆ ಹೊಸದಾದದ್ದು ಏನಾದರೂ ಇರಬೇಕು ಇಲ್ಲ ಹೊಸತಪ್ಪನ್ನಾದರೂ ಮಾಡಬೇಕು" ಎಂದು ಹೇಳುತ್ತಿದ್ದರು.

ಕರ್ನಾಟಕ ಇವತ್ತು ಇರುವುದಕ್ಕಿಂತ ಮೂರರಷ್ಟು ದೊಡ್ಡದಿತ್ತು. ಇಂದು ಇರುವುದನ್ನು ಉಳಿಸಿಕೊಳ್ಳುವಷ್ಟು ಮಟ್ಟಿಗೆ ಕೆಲಸಮಾಡಬೇಕು.

ವಚನಗಳು ನಡೆದು ನುಡಿದ ವಚನಗಳು ಎಂದು ೧೨ನೇ ಶತಮಾನದ ವ್ಯಕ್ತಿ ಹೇಳಿದ ವ್ಯಾಖ್ಯಾನ. ವಚನಕಾರರು ಅದರಂತೆ ನಡೆದು ನುಡಿದರು. ತೀನಂಶ್ರೀ, ಡಿಎಲ್‌ಎನ್ ಇವರೆಲ್ಲ ನಡೆದು ನುಡಿದವರು. 'ಹುಸಿಯನುಡಿಯಬೇಡ' ಎಂಬಂತೆ ಶುಭ್ರ ಮನಸ್ಸಿನವರು. ಇವರು ನಮ್ಮಲ್ಲಿ ಉತ್ಸಾಹಮೂಡಿಸಿದವರು, ಬಸವಣ್ಣನ ನೆನಹು ಸುಖಸಮುದ್ರವಯ್ಯ, ಕುವೆಂಪು, ತೀನಂಶ್ರೀ, ಡಿಎಲ್‌ಎನ್ ಇವರ ನೆನಪೂ ಸುಖಸಮುದ್ರವಯ್ಯ.

**ಡಾ. ಕರೀಗೌಡ ಬೀಚನಹಳ್ಳಿ :**

ಡಿಎಲ್‌ಎನ್ ಶಿಷ್ಯರು ನಮಗೆ ಮಾದರಿ, ಸಂಶೋಧನ ಕಾರ್ಯದಲ್ಲಿ ಮುಂದುವರೆದು ಈ ಮೂಲಕ ತೊಡಗಬೇಕಾಗಿದೆ. ಅಧ್ಯಯನ ಕಮ್ಮಟ ಕಾರ್ಯಾಗಾರಗಳ ಮೂಲಕ ಮಾಡುತ್ತೇವೆ. ಸಂಸ್ಕೃತಿಗೆ ವಿಶಿಷ್ಟವಾದ ಚೌಕಟ್ಟನ್ನು ತೊಡಿಸಿದರು, ಡಿಎಲ್‌ಎನ್ ಅಧ್ಯಯನ ಶೀಲ ವ್ಯಕ್ತಿ, ಅವರ ಕೆಲಸ ಮುಂದುವರೆಸಿಕೊಂಡು ಹೋಗುವುದು ಅತ್ಯವಶ್ಯಕ. ಡಿಎಲ್‌ಎನ್ ಅಧ್ಯಯನ ಪೀಠ ಸ್ಥಾಪಿಸಬೇಕಾಗಿದೆ. ತೀನಂಶ್ರೀ ಶತಮಾನೋತ್ಸವವೂ ಬರ್ತಾ ಇದೆ.

**ಎಂ.ಎನ್. ಸೀತಾರಾಂ :**

ಡಿಎಲ್‌ಎನ್ ವಿದ್ವತ್, ಪ್ರತಿಭೆ ನೋಡ್ತಾ ಇದ್ರೆ ನಾನು ಅವರ ಶಿಷ್ಯನಾಗಲಿಲ್ಲವಲ್ಲ ಎಂಬ ಭಾವನೆ ಉಂಟಾಗುತ್ತದೆ. ಶಿಷ್ಯರ ಮೇಲೆ ಇವರ ಪ್ರಭಾವ ಬೀರಿದ ಪರಿಣಾಮ ನೋಡಿದರೆ ನನಗೆ ಬಹಳ ಸಂಕೋಚವಾಗುತ್ತದೆ. ಒಮ್ಮೆ ಇವರು ನನಗೆ ಈ ಪುಸ್ತಕ ನೋಡಿದ್ದೀರೋ ಎಂದು ಚಾವುಂಡರಾಯನ ಲೋಕೋಪಕಾರ ನೀಡಿದ್ದರು. ನಾನು ಅದರಲ್ಲಿ ವೃಕ್ಷಾಯುರ್ವೇದ ಮೊದಲಾದುದನ್ನು ಓದಿದ್ದೆ. ಒಂದು ಸೆಮಿನಾರ್‌ನಲ್ಲಿ ಏನಾದರೂ ಹೊಸತು ಮಾತನಾಡಿ ಎಂದಾಗ ಹಳೆಯ ವಿಚಾರವಾದ ಲೋಕೋಪಕಾರದ ಬಗ್ಗೆಯೇ ಮಾತನಾಡಿದೆ ಜನ ಆಶ್ಚರ್ಯಪಟ್ಟರು. (ಏರಾಂಡಿ, ಈರಿ ಈರುಂಡಿ ರೇಷ್ಮೆ ವಿಧಗಳು).

**ಡಾ. ಟಿ.ವಿ. ವೆಂಕಟಾಚಲಶಾಸ್ತ್ರೀ :**

ಬಿ.ಎಂ.ಶ್ರೀ ಗುರುಗಳು, ಉಳಿದವರು ಮೇಷ್ಟ್ರುಗಳು ಎಂದು ಡಿಎಲ್‌ಎನ್ ಹೇಳ್ತಾ ಇದ್ರು, ಈಗಾಗಲೇ ಬಿ.ಎಂ.ಶ್ರೀ ಪ್ರತಿಷ್ಠಾನದಲ್ಲಿ ಡಿಎಲ್‌ಎನ್ ಹೆಸರಿನಲ್ಲಿ ದತ್ತಿ ಇದೆ. ಬಿಟ್ಟುಹೋದ ಕೆಲವು ಲೇಖನ ಪ್ರಕಟಿಸುತ್ತೇವೆ. ನಮ್ಮೇಷ್ಟ್ರ ವಿಚಾರ ಕೇಳಿ ನಾವಂತೂ ಹಂಡೆಹಾಲು ಹೊಯ್ದಷ್ಟು ಸಂತೋಷಗೊಂಡಿದ್ದೇವೆ.

**ಅಗ್ರಹಾರ ಕೃಷ್ಣಮೂರ್ತಿ :**

ಡಿಎಲ್‌ಎನ್ ಪ್ರತಿದಿನದ ಬೆಳವಣಿಗೆಯನ್ನು ಹೇಳುತ್ತಿದ್ದವರು ಸಂಶೋಧನೆಯನ್ನು ಸುಲಭವಾಗಿ ಅರ್ಥೈಸುವ ವ್ಯಕ್ತಿತ್ವ ಇವರದಾಗಿತ್ತು.

**ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ :**

ನೇರಶಿಷ್ಯರಲ್ಲದಿದ್ದರೂ ಶಿಷ್ಯರ ಶಿಷ್ಯರು.

ಪಾಂಡಿತ್ಯದ ಶ್ಲಾಘನೆ, ಅದಕ್ಕಿರುವ ಅಧಿಕಾರಪ್ರತಿಷ್ಠಾನಕ್ಕೆ ವಿದ್ವಾಂಸರಲ್ಲಿ ಕಂಡುಬಂದಿದೆ. ಅಂತರಾಳದ ಮಾತುಗಳನ್ನಾಡಿದ್ದಾರೆ. ಗುರುಪರಂಪರೆ ಮಹತ್ವ ಮನಗಾಣಿಸಿದ್ದಾರೆ. ಅನುಭವ ಹೇಳಿದ್ದು ಮನತಟ್ಟುವಂತೆ ಇದೆ. ಅವರ ವ್ಯಕ್ತಿತ್ವದ ವೈಶಾಲ್ಯ ಪಾಂಡಿತ್ಯದ ಜೊತೆ ಮಾನವೀಯತೆ ವಿದ್ವಾಂಸರಾಗುವಲ್ಲಿ ಇರಬೇಕು. ಸಂಶೋಧನೆ, ವಿದ್ವತ್ ಕ್ಷೇತ್ರ, ಸಾಮಾಜಿಕ, ರಾಜಕೀಯ ಧೋರಣೆ, ಸೋವಿಯತ್ ರಷ್ಯಾದಲ್ಲಿ ಮಕ್ಕಳರಂಗಭೂಮಿ ಬಗ್ಗೆ ಬರೆದ ಲೇಖನ ಓದಿದಾಗ ಅವರಲ್ಲಿ ಅಡಗಿದ್ದ ವಿವಿಧ ಮುಖಗಳನ್ನು ತಿಳಿಯಬಹುದು. ಸಮತಾವಾದದ ಪ್ರಜ್ಞೆ, ಶ್ರೀಮಂತರಾಷ್ಟ್ರಗಳಲ್ಲಿ ಮಕ್ಕಳಲ್ಲಿ ನೈತಿಕತೆ ಕಡಿಮೆ ಆಗುತ್ತಿರುವುದರ ಬಗ್ಗೆ ಆಕ್ರೋಶವ್ಯಕ್ತ ಪಡಿಸುತ್ತಾರೆ. ಮನುಷ್ಯರ ಹಿತಬಯಸುವವರು ಸಂಪ್ರದಾಯ–ನಿರ್ಬಿಡೆಯಿಂದ ವ್ಯಕ್ತಪಡಿಸ ಬಲ್ಲರು. "ಸತ್ಯನಿಷ್ಠುರತೆ, ಮುಕ್ತಮನಸ್ಸು ಸಂಶೋಧನೆಗೆ ಬೇಕು", ಇದು ಅವರಿಗೆ ಇತ್ತು. ಗಾಂಧೀಸಾಹಿತ್ಯ ಓದಿ ಅವರ ಮನ ಬದಲಾಗಿರುವುದು, ದೇಶ ಬದಲಾಗಿರುವುದು, ಗಾಂಧಿಯನು ಸಾಹಿತಿಯಾಗಿ ಮಾಡಿದ್ದಾರೆ. ಶಾಸನ ಸಭೆಯಲ್ಲಿ ಮಾಡುವ ಕೆಲಸ ಗಾಂಧೀಜಿ ಮಾಡಿದ್ದಾರೆ ಎಂದಿದ್ದಾರೆ. ಕಾನೂನು ಶಾಸನಗಳ ವೈಫಲ್ಯ ಗುರುತಿಸಿದ್ದಾರೆ. ಸಾಹಿತ್ಯದಿಂದ ಕ್ರಾಂತಿ ಉದ್ಭವವಾಗುತ್ತದೆ. ಇದರಿಂದ ಇವರ ವ್ಯಕ್ತಿತ್ವಕ್ಕೆ ಬೇರೆ ಬೇರೆ ಮುಖಗಳಿದ್ದವೂ ಎಂಬುದು ತಿಳಿಯುತ್ತದೆ. ರಾಜಾಶ್ರಯ ಪಡೆದ ಸಾಹಿತ್ಯಿಕ ಕೃತಿ ಕೃತಕವಾಗುತ್ತದೆ. ಕವಿಯ ಸ್ವಾತಂತ್ರಕ್ಕೆ ಧಕ್ಕೆಯಾಗುತ್ತದೆ. ಚರಿತ್ರೆ ಪಿತೂರಿಗಳ ರಾಜರ ಕತೆ. ಆದರೆ ಸಾಹಿತ್ಯ ಚರಿತ್ರೆ ದೇಶದ ಆತ್ಮಕತೆ, ಚರಿತ್ರೆ ಜ್ಞಾನ ನಮ್ಮ ಜನಕ್ಕಿಲ್ಲ. ರಾಮಾಯಣ ಭಾರತಗಳೂ ಈ ದೇಶದ ಆತ್ಮಗಳು ಎಂದು ಹೇಳಿದ್ದಾರೆ. ಇಲ್ಲಿರುವ ಪರಿಪೂರ್ಣತೆ ಬೇರೆಲ್ಲೂ ಇಲ್ಲ. ಉದಾರವಾದಿ ಚಿಂತನೆಯ ಭಾಗವಾಗಿ ಈ ಚಿಂತನೆ ಬಂದಿದೆ. ಅವರ ಮೌಲಿಕಕಾರ್ಯ ಗುರುತಿಸುವ ಕೆಲಸ ಇಂದಾಗಿದೆ.

**ಡಾ. ಬಿ.ಎ. ವಿವೇಕ ರೈ :**

ಚಿದಾನಂದಮೂರ್ತಿ, ವೆಂಟಾಚಲಶಾಸ್ತ್ರೀಗಳು ಅವರ ಕಾರ್ಯಗಳನ್ನು ಮುಂದುವರೆಸಿ ಕೊಂಡು ಬಂದಿದ್ದಾರೆ. ಸಂಶೋಧನೆ, ಸಾಹಿತ್ಯ ಸಂಸ್ಕೃತಿ ಸಂರಕ್ಷಣೆ, ಅಧ್ಯಾಪನದ ಶಿಥಿಲತೆ ಬಗ್ಗೆ ಹೇಳಿದ್ದಾರೆ. ಕನ್ನಡ ವಿವಿ 'ಕುಟುಂಬಗಳನ್ನು' ಸೇರಿಸಿಕೊಂಡು ಕಟ್ಟುವೆವು. ಹಿರಿಯ ವಿದ್ವಾಂಸರು ವಿದ್ವತ್ ಅನ್ನು ನಮಗೆ ನೀಡಿದ್ದಾರೆ. ಕನ್ನಡದಲ್ಲಿ ಏನು ಆಗಬೇಕು, ಎಂಬುದನ್ನು ನೀಲನಕಾಶೆ ಮಾಡಿ, ಕ್ರೋಢೀಕರಿಸಿದರೆ ತಿಳಿಯುತ್ತೆ.

❒

# ೯. ಗೋಕಾಕರು ಕಂಡ ಹಡಗು

■ ಪ್ರೊ. ಕೆ.ಎಸ್. ಮಧುಸೂದನ

ಗೋಕಾಕರ ಸಮುದ್ರ ಗೀತೆಗಳು ಕವನ ಸಂಕಲನದಲ್ಲಿ ಹಡಗನ್ನು ಕುರಿತ ನಾಲ್ಕು ವಿಶಿಷ್ಟ ಕವಿತೆಗಳಿವೆ:

೧. ಉಂಟು
೨. ನೌಕಾರಾವಣ
೩. ಹಡಗದ ಚಂದ
೪. ಇಲ್ಲಿಯ ನ್ಯಾಯ

ಈ ಕವನಗಳು ಇತಿಹಾಸಪ್ರಧಾನವಾಗಿಲ್ಲ. ಇಲ್ಲಿ ವಿವರಣಾತ್ಮಕವಾದ ವ್ಯಾಖ್ಯಾನಗಳೂ ಇಲ್ಲ. ಅಲ್ಲಲ್ಲಿ ಹಡಗನ್ನು

ಯಾವುದಾದರೂ ಪ್ರತಿಮೆಗೆ ಹೋಲಿಸುತ್ತಾ ಜೀವನದ ದಾರುಣ ಅನುಭವಗಳನ್ನು ಕಾಣಿಸುವ ಪ್ರಯತ್ನ ಮಾಡಿದೆ.

ಹಡಗಿನ ಮೇಲೆ ನಿಂತು ಬೇರೆ ಬೇರೆ ಕಾಲಗಳಲ್ಲಿ ಅಪಾರವಾದ ಸಮುದ್ರವನ್ನು ನೋಡಿದಾಗ ಕವಿಗೆ ಉಂಟಾದ ವಿಸ್ಮಯವಾಗಲೀ, ಸಮುದ್ರ ತೀರದ ನಾಡು ಬೀಡುಗಳನ್ನು ಕಂಡಾಗ ಉಂಟಾದ ಐತಿಹಾಸಿಕ ವಿವೇಚನೆಯಾಗಲೀ ಈ ಕವನಗಳಲ್ಲಿ ಕಂಡು ಬರುವುದಿಲ್ಲ. ತಾನು ನಿಂತ ಹಡಗನ್ನೇ ಒಮ್ಮೆ ನೋಡಿದಾಗ ತಾನು ನಿಂತ ಜಾಗದ ಆಚೆಯ ದೂರ ದೃಶ್ಯವಾಗಿ ಹಡಗೇ ಕೇಂದ್ರ ವಸ್ತುವಾಗಿ ಕವಿಗೆ ವಿಲಕ್ಷಣ ಅನುಭವವನ್ನು ಉಂಟು ಮಾಡುತ್ತದೆ. ಅಂತಹ ಅನುಭವಗಳು ಅನೇಕ ಸ್ತರಗಳಲ್ಲಿ ಉಂಟಾಗಿ ಕೊನೆಗೆ ಕವಿ ತಮ್ಮ ಆದರ್ಶಪ್ರಿಯತೆಯನ್ನು ಮರೆಯದೆ ಮೆರೆಯಿಸುತ್ತಾರೆ.

**'ಉಂಟು'** ಕವನದಲ್ಲಿ ಹಡಗು ಒಂದು ವಿಲಕ್ಷಣ ಪ್ರಾಣಿಯಂತೆ ತೋರಿದೆ. ತೇಲುವ ಹಡಗು ತನ್ನ ಕೊಕ್ಕಿನಿಂದ ಅಲೆಗಳನ್ನು ಕತ್ತರಿಸಿ ತನ್ನ ರೆಕ್ಕೆಯ ಗರಿಗಳನ್ನು ಹರಡಿಕೊಂಡು ಸೂರ್ಯನ ಕಿರಣಗಳಿಂದ

ಪ್ರಕಾಶಿಸುತ್ತಾ ಈಜಾಡುವ ರಾಜಹಂಸದ ಹಾಗೆ, ಅರ್ಜುನನು ನಡೆಸಿದ ರಥದಂತೆ, ಶ್ರೀಕೃಷ್ಣನು ನಡೆಸಿದ ತೇರಿನಂತೆ ತೋರಿದೆ. ಕೃಷ್ಣನು ನಡೆಸುತ್ತಿದ್ದ ಪಾರ್ಥನ ರಥವನ್ನು ಕುರಿತ ಈ ಪೌರಾಣಿಕ ಪ್ರತಿಮೆ ಉಚಿತವಾಗಿ ಮೂಡಿ ಬಂದಿದೆ. ಕವಿಯು ಹಡಗಿನ ಯಾವ ಭಾಗಗಳನ್ನು ಕಂಡರೂ ಅದು ಮನೋಹರವಾಗಿತ್ತು. ನೋಡಿದಲ್ಲೆಲ್ಲಾ ಕೆಸರಿನಂತಹ ಕರಿ ನೀರೊಳಗಿಂದ ಮಜ್ಜಿಗೆ ಕಡೆಯುವ ನೀರೆಯಂತೆ ಕಂಡುದಲ್ಲದೆ ಸಮುದ್ರದ ನೀಲಿ ಶ್ರೀಕೃಷ್ಣನ ಮೈಬಣ್ಣವನ್ನು ಕವಿಗೆ ನೆನಪಿಗೆ ತಂದು ಕೊಟ್ಟಿದೆ. ಆದುದರಿಂದ ಮೇಘಶ್ಯಾಮನ ಮೈಬಣ್ಣದ ನೀರಿನಿಂದ ತನಿಯಾದ ಬೆಣ್ಣೆಯನ್ನು ತೆಗೆಯುವ ಗೋಪಿಯಂತೆ ಹಡಗು ಅವರಿಗೆ ಕಾಣಿಸಿದ್ದು ಈ ರಮ್ಯ ಭಾವನೆಗಳು ಸಹಜವಾಗಿ ಕವಿಯಿಂದ "ಇಂಥ ದೃಶ್ಯವನ್ನು ನೋಡದವರು ಎಂಥ ಪಾಪಿ" ಎಂಬ ಉದ್ಗಾರ ತೆಗೆಯುವಂತೆ ಮಾಡಿದೆ. ಸಮುದ್ರದ ಮೇಲೆ ಸಾಗುತ್ತಿರುವ ಹಡಗಿನ ಬಗ್ಗೆ ಕವಿಗೆ ಕೆಲವು ಪ್ರಶ್ನೆಗಳು ಎದ್ದು ಅವುಗಳಿಗೆ ಉತ್ತರವೇ ಈ **'ಹಡಗು'** ಎಂದು ಕವನದ ಅಂತ್ಯದಲ್ಲಿ ಕವಿ ಹೇಳಿದ್ದಾರೆ.

ರಾಜಹಂಸ, ಪಾರ್ಥನ ರಥ, ಮಜ್ಜಿಗೆ ಕಡೆಯುವ ಸ್ತ್ರೀ, ಗೋಪಿಕಾ ಸ್ತ್ರೀ, ವಿಂಧ್ಯಾಚಲ– ಇವುಗಳಿಗೆ ಹಡಗನ್ನು ಹೋಲಿಸುವ ಈ **'ಉಂಟು'** ಕವನ ವಿನಾಯಕರ ನವೋದಯ ಕವನಗಳಲ್ಲಿ ಒಂದು ಗಮನಾರ್ಹ ಕವನ.

**'ನೌಕಾರಾವಣ'** ಕವನದಲ್ಲಿ ಹಡಗು ಒಂದು ರಾಕ್ಷಸ ಪ್ರವೃತ್ತಿಯ ಪ್ರತೀಕವಾಗಿ ಚಿತ್ರಿತವಾಗಿದೆ. ಹಡಗಿನ ಬಗ್ಗೆ ವಿನಾಯಕರಿಗೆ ರಮ್ಯ ಭಾವನೆಗಳು ಚದುರಿ ಹೋಗಿ ಜೀವನದ ವಿಕೃತಿ, ವಕ್ರತೆ, ರೂಕ್ಷತೆಗಳಿಗೆ ಹಡಗು ಒಂದು ಸಂಕೇತವಾಗಿದೆ. ಹಡಗಲ್ಲ ಇದು ಹದಗಡಕ, ನಿಶಾಚರ, ಅಹಿರಾವಣ, ಮಹಿರಾವಣ, ಶೂರ್ಪನಖಿಯ ಆಪ್ತಬಂಧು–

ಮುಂತಾದ ಘೋಷಣೆಯೊಂದಿಗೆ ಕವಿತೆ ಆರಂಭವಾಗಿದೆ. ಹೀಗೆ ಹಡಗಿಗೆ ರಾಕ್ಷಸತ್ವವನ್ನು ಆರೋಪ ಮಾಡಿ ಕವನದ ಉದ್ದಕ್ಕೂ ಆ ರಾಕ್ಷಸೀ ಪ್ರವೃತ್ತಿಯ ಹೋಲಿಕೆಗಳನ್ನು ಮುಂದು ವರೆಸಿದ್ದಾರೆ. ಮೊಸಳೆಯಂತೆ ವಕ್ರವಾಗಿ, ಒಕ್ಕಣ್ಣಿನ ರಾಕ್ಷಸನಂತೆ ಭಯಂಕರವಾಗಿ, ಜಿಂಕೆಯನ್ನು ತಿಂದ ಹೆಬ್ಬಾವಿನಂತೆ ಒದ್ದಾಡುತ್ತಾ ಇರುವಂತೆ ಹಡಗು ಕವಿಗೆ ಕಂಡಿದೆ.

ರಾಜಹಂಸದಂತೆ ಕಂಡ ಹಡಗೇ ಹೆಬ್ಬಾವಿನಂತೆ ಕಾಣುತ್ತಿರುವುದು ವಿನಾಯಕರ ಅನುಭವದಲ್ಲಿ ಆಗಿರುವ ಬದಲಾವಣೆಗೆ ಸಾಕ್ಷಿ. ಇಲ್ಲೇ ಅವರು ನವ್ಯದ ದಾರಿಯನ್ನು ಹಿಡಿದಿರುವುದು. ಜ್ವಾಲಮುಖಿಯಂತಹ ಚಿಲುಮೆಯೊಂದರಲ್ಲಿ ಹೊಗೆಸೊಪ್ಪಿನ ಚಿಲುಮೆಯಿಂದ ಹೊಗೆಯನ್ನು ಬಿಡುವಂತೆ ಹೊಗೆಯನ್ನು ಉಗುಳುತ್ತಾ ಗುಲಾಮರಿಂದ ಸೇವೆ ಮಾಡಿಸಿ ಕೊಳ್ಳುತ್ತಿರುವ ಹಡಗು ಹದಗಡಕವೇ ಸರಿ.

' ಮನೆ ಮಾರಿನಿಂದ ಎಳೆದು ತಂದು ಗಂಟಿಕ್ಕಿ ನೂರೊಂದು ನೇಣಿನಿಂದ ಸೆರೆಯಿಕ್ಕಿದೆ
ನೂರೆಂಟು ನಾವಿಗರನ್ನ'

ಎನ್ನುವಲ್ಲಿ ಕವಿಗೆ ಆಧುನಿಕ ಸಂಕೀರ್ಣ ಜೀವನದ ಬಗ್ಗೆ ಇರುವ ಪ್ರಜ್ಞೆ ಗೋಚರವಾಗುತ್ತದೆ.

'ಮೈ ತುಂಬಾ ಇದ್ದಲಿಯನಿರಿಸಿ ಸ್ನಾಯುಪಿನ ಮೇಲೆ ಧಮನಿಯ ಕೆಳಗೆ ಓಡಾಡಿಸುತ್ತಿದೆ ನಮ್ಮನ್ನು' ಎಂದು ವರ್ಣಿಸಿ ಹಡಗಿನ ಸ್ವರೂಪದ ಚಿತ್ರವನ್ನು ಸೊಗಸಾಗಿ ನೀಡುತ್ತಾರೆ. ಹಡಗು ಚಲಿಸುತ್ತಿದ್ದರೆ ತಮಗೆ ಉಸಿರು, ಇಲ್ಲದಿದ್ದರೆ ಅದು ಯಾವುದಾದರೂ ಬಂದರಿನಲ್ಲಿ ನಿಂತಾಗಲೇ ತಮಗೆ ಜೀವನ. ಅದುವರೆಗೂ ಆ ನೌಕಾರಾವಣನ ಕರುಣೆಯಲ್ಲೇ ಬಾಳಬೇಕು. ಮಾನವತೆಯೇ ಇಲ್ಲದಂತಹ ಹಡಗನ್ನು ಕವಿ ಇಲ್ಲಿ ವರ್ಣಿಸಿದ್ದಾರೆ.

**'ಇಲ್ಲಿಯ ನ್ಯಾಯ'** ಕವನದಲ್ಲಿ ಹಡಗಿನಲ್ಲಿ ಸಾಗಿಸುವ ಜೀವನದಲ್ಲಿ ನಡೆಯುತ್ತಿದ್ದ ಅನ್ಯಾಯಗಳ ಬಗ್ಗೆ ಆಕ್ರೋಶಭರಿತ ಉಕ್ತಿಗಳಿವೆ. ಹಡಗು ಒಂದು ನರಕದಂತೆ ಕಂಡು, ಪಯಣವಿಲ್ಲದೆ ನರರು ಬಾಳಿದರೆ ತಪ್ಪೇನಿತ್ತು ಎಂಬ ಮೂಲಭೂತ ಪ್ರಶ್ನೆ ಕವಿಯನ್ನು ಕಾಡಿದೆ. ಬಿಳಿಯರ ದಾಸ್ಯದಲ್ಲಿ ಬೆನ್ನು ಮುರಿಯುವಂತೆ ದುಡಿಯುವ ಕರಿಯರ ಬಾಳುವೆಯನ್ನು ಕಂಡು ನಮ್ಮ ಜೀವನದಲ್ಲಿರುವ ವರ್ಗ ಭೇದ, ವರ್ಣ ಭೇದಗಳು ಕವಿಗೆ ನೆನಪಿಗೆ ಬಂದಿದೆ. ಪಶುವಿಗಿಂತ ಕಡೆಯಾಗಿ, ಪಕ್ಷಿಗಿಂತ ಕೀಳಾಗಿ ಮಾನವ ಜಾತಿಯವರನ್ನು ಮಣ್ಣು ಮುಕ್ಕಿಸುವ ಜೀವನ ಕಣ್ಣು ಕಾಣಿಸುವವರೆಗೂ ಮೈಯಲ್ಲಿ ಎಣ್ಣೆ ತೀರುವವರೆಗೂ ದುಡಿಯಬೇಕಾದ ಹಡಗಿನ ಸೇವಕರ ಜೀವನ ಕವಿಗೆ ಮರುಕವುಂಟು ಮಾಡುವುದರ ಜೊತೆಗೆ ಅಂತಹ ಜೀವನಕ್ಕೆ ಕಾರಣರಾದವರ ಬಗ್ಗೆ ರೋಷ ಉಂಟಾಗಿದೆ. ಹಡಗಿನಲ್ಲಿದ್ದ ದಾಸ್ಯ ಜೀವನವನ್ನು ನೆನೆದಾಗ ಕವಿಗೆ ಆಗ ದಾಸ್ಯದಲ್ಲಿದ್ದ ಭಾರತದ ನೆನಪು ಬಂದು ದಾಸ್ಯವಿದ್ದರೂ ಚಿಂತೆಯಲ್ಲಿ ಮದೋನ್ಮತ್ತತೆಯಿಂದ ಕುರುಡಾಗಿ ಮಾನವೀಯತೆಯನ್ನು ಕಳೆದುಕೊಳ್ಳುವುದು ಮಾತ್ರ ತಾಯಿನಾಡಿಗೆ ಬೇಡ ಎಂದು ಬಯಸುತ್ತಾರೆ. ಒಂದು ನಾಡಿಗೆ ಬಡತನ, ಒಡಕುತನ ಬರಬಹುದು, ಆದರೆ ಬಂಡವಾಳಶಾಹಿ ಜನ ನಡೆಸುವ ಹೀನ ರೀತಿಯ ಬದುಕು ಮಾತ್ರ ಬರುವುದು ಬೇಡ ಎಂದು ಕವಿಯ ಅಪೇಕ್ಷೆ. ಹಡಗು ಆಧುನಿಕ ಯಂತ್ರ ನಾಗರೀಕತೆಯ ಪ್ರತೀಕವಾಗಿ ಕ್ರೌರ್ಯ,ದಾಸ್ಯ, ಅನ್ಯಾಯ, ಕೃತಕತೆಗಳ ಭಯಂಕರ ಲೋಕವಾಗಿ ಕವಿಚೇತನವನ್ನು ಒಂದು ನಿರಾಶೆಯ ಅಂಚಿಗೆ ಕರೆದೊಯ್ದಿದೆ. ಆದರೆ ವಿನಾಯಕರ ಗೂಢ ಕಾವ್ಯ ಪ್ರಜ್ಞೆ ನಿರಾಶೆಯಲ್ಲಿ ನಿಲ್ಲತಕ್ಕದ್ದಲ್ಲ. ಅದನ್ನು ಹಾದು ಮುಂದೆ ಹೋಗುವಂತಹುದು. ಬದುಕಿನ ಅನ್ಯಾಯಗಳು ಕವಿಯನ್ನು ತತ್ತರಿಸುವಂತೆ ಮಾಡುವುದಿಲ್ಲ. ಹುಟ್ಟಿನೊಂದಿಗೆ ಕೂಡಿ ಬಂದ ಶ್ರದ್ಧೆಯನ್ನಾಗಲೀ, ಆದರ್ಶಪರತೆಯನ್ನಾಗಲೀ ಕವಿ ಕೈಬಿಟ್ಟು ತತ್ಕಾಲಕ್ಕೆ ತಾನು ಕಂಡ ನಿರಾಶೆಯನ್ನು ದೊಡ್ಡದು ಮಾಡಿ ಗಲಭೆ ಎಬ್ಬಿಸುವುದಿಲ್ಲ. ಕವಿಯ ಈ ಮನೋಭಾವಕ್ಕೆ **'ಹಡಗದ ಚಂದ'** ಕವನ ಉದಾಹರಣೆಯಾಗಿದೆ.

ಬದುಕಿನ ಅಸ್ತವ್ಯಸ್ತತೆಗಳಲ್ಲಿಯೂ ತಕ್ಷಣ ಮೂಡುವ ನಿರಾಶೆಯ ಹಿಂದೆಯೇ ಯಾವುದೋ ಒಂದು ಶಿಸ್ತು, ಒಂದು ಕ್ರಮ, ಒಂದು ಅಂದ ಇದೆ ಎನ್ನುವ ಪ್ರಜ್ಞೆ ಕವಯಲ್ಲಿ ಎಚ್ಚರವಾಗಿ 'ಒಂದು ಮಾಟವಿದೆ ಮೋಟು ಮರದಂತೆ ಈ ಹಡಗಿನಲ್ಲಿ' ಎಂದು ಅನ್ನಿಸುತ್ತದೆ. ಹಡಗು ಬರಿಯ ಕಬ್ಬಿಣದ ಕಟ್ಟಡವಲ್ಲ, ಜನಭರಿತವಾದ ನೂರು ಭಾಷೆಗಳನ್ನು ಮಾತನಾಡುವವರಿಂದ ಕೂಡಿದ ಒಂದು ಬ್ರಹ್ಮಾಂಡ ಎಂದಿದ್ದಾರೆ. ಈ ಪಟ್ಟಣವು ವಿಶ್ವಕರ್ಮ ಸೃಷ್ಟಿಸಿ ಸಪ್ತ ಸಾಗರದ ಮೇಲೆ ತೇಲುಬಿಟ್ಟನೇನೊ ಎನ್ನುವಂತೆ ತಿಮಿಂಗಲದ ಹಾಗೆ ಈ ಹಡಗು ಸಮುದ್ರದ ಮೇಲೆ

ತಿರುಗುತ್ತಿದೆ. ಭಾರತ, ಅರಬ್ ದೇಶ, ಈಜಿಪ್ಟ್, ಯೂರೋಪ್ – ಹೀಗೆ ದೇಶ ದೇಶಗಳನ್ನು ವಾಯುವೇಗದಲ್ಲಿ ಸುತ್ತುವ ಹಡಗಿನಲ್ಲಿ ಮನೆಗಿಂತ ವಿಶೇಷವಾದ ಸ್ವಾತಂತ್ರ್ಯವಿದೆ. ಇದು ಹಡಗಲ್ಲ, ಹದಗಡಕ, ನಿಶಾಚರ ಎಂದ ಕವಿ ಈ ಕವನದಲ್ಲಿಯೂ ಸಹ ಇದು ಹಡಗಲ್ಲ, ಸಂಕ್ಷಿಪ್ತ ಬ್ರಹ್ಮಾಂಡವಿದು, ಮನುಷ್ಯನ ಕುಶಲತೆಯ ಕಳಶ ಎಂದು ಹಡಗನ್ನು ಆದರ್ಶಮಯವಾಗಿ ಹೊಗಳಿದ್ದಾರೆ. ಹಡಗದ ಚಂದ ಕವಿಯ ಬೆಳವಣಿಗೆಯನ್ನೇನೂ ಸೂಚಿಸದಿದ್ದರೂ ವಿನಾಯಕರ ಕಾವ್ಯ ಮನೋಧರ್ಮದ ಸಂಕೇತವಾಗಿದೆ.

ಒಟ್ಟಿನಲ್ಲಿ ಹಡಗು ಹಾಗೂ ಅದರ ಮೇಲಿನ ಜೀವನ ಕಾವ್ಯದ ವಿಶೇಷ ಸಾಮಗ್ರಿಯಾಗಿ ಕವಿಯ ಆಸಕ್ತಿಯನ್ನು ಕೆರಳಿಸಿರುವುದು ಗಮನಾರ್ಹ. ಆದರೆ ಕವಿಯ ಆದರ್ಶಪ್ರಿಯತೆ ಕಡಿಮೆಯಾಗದೆ ಹೋಗುವುದು ಇಲ್ಲಿನ ವೈಶಿಷ್ಟ್ಯಗಳಲ್ಲಿ ಒಂದು. ಹಡಗು ವಿನಾಯಕರಿಗೆ ಜೀವನವನ್ನು ಅಳೆಯುವ ಮಾನದಂಡವಾಗಿ ನಿಲ್ಲುತ್ತದೆ.ಜೀವನದ ಹಿಂದಿರುವ ಯಾವುದೋ ಅಗೋಚರವಾದ ನಿಯಮವನ್ನು ನಂಬುವ ಶ್ರದ್ಧೆ ವಿನಾಯಕರ ಈ ಕವನಗಳಲ್ಲಿ ಎದ್ದು ಕಾಣುತ್ತದೆ.

❒

# ೧೦. ಪೂರ್ಣ ಸಂಕೀರ್ಣತೆಯ ಉಪಾಸಕ : ಡಾ. ವಿ.ಕೃ. ಗೋಕಾಕ್

■ ಪ್ರೊ. ಕೆ.ಎಸ್. ನಿಸಾರ್ ಅಹಮದ್

ಡಾ. ವಿನಾಯಕ ಕೃಷ್ಣ ಗೋಕಾಕರದು ಬಹುಮುಖ ಸಾಧನೆ. ಲೋಕ ಸಂಸರ್ಗ ಮತ್ತು ಆಳವಾದ ವ್ಯಾಸಂಗಗಳಿಂದ ಪರಿಪುಷ್ಟ ವಾದ ಸಾರಸ್ವತ ಚೇತನ. ಅವರು ತೊಡಗಿದ ಸಾರ್ವಜನಿಕ ಹಿತದ ಕಾರ್ಯಕಲಾಪಗಳಾಗಲಿ, ಸಾಹಿತ್ಯ ಪ್ರಕಾರಗಳಾಗಲಿ ಸುಸಮೃದ್ಧ ಮತ್ತು ಶ್ಲಾಘ್ಯಾರ್ಹವಾಗಿವೆ. ಕವಿತೆ, ವಿಮರ್ಶೆ, ಕಾದಂಬರಿ, ನಾಟಕ, ಪ್ರವಾಸ ಸಾಹಿತ್ಯ, ಪ್ರಬಂಧ ಮುಂತಾದ ರಚನೆಗಳಲ್ಲಿ ಬೃಹತ್ತಿನೊಡನೆ ಗುಣವೂ ಜೊತೆಗೂಡಿರುವುದನ್ನು ಮನಗಾಣಬಹುದು. ಕನ್ನಡ, ಇಂಗ್ಲಿಷ್ ಎರಡರಲ್ಲೂ ಸಮಾನ ಪ್ರಭುತ್ವವುಳ್ಳ ಗೋಕಾಕರು ಎಪ್ಪತ್ತೈದಕ್ಕೂ ಮಿಕ್ಕು ಕೃತಿ ರಚನೆ ಮಾಡಿದ್ದಾರೆ. "ಸಮರಸವೇ ಜೀವನ" ವೆಂಬ ಮಹಾಕಾದಂಬರಿ ಹಾಗೂ "ಭಾರತ ಸಿಂಧು ರಶ್ಮಿ" ಮಹಾಕಾವ್ಯ ಅವರ ಲೋಕಾನುಭವ, ಅಧ್ಯಯನ, ಚಿಂತನಗಳು ಮುಪ್ಪುರಿಗೊಂಡ ಶಿಖರಕೃತಿಗಳಾಗಿವೆ; ಹೊಸಗನ್ನಡಸಾಹಿತ್ಯದಲ್ಲಿ ಗೋಕಾಕರ ಅಂತಸ್ತನ್ನು ಏರಿಸಿವೆ; ಜೊತೆಗೆ ವಿಶ್ವಮಾನ್ಯ ಕೃತಿಗಳ ಸಾಲಿಗೆ ಸೇರುವ ಅರ್ಹತೆಯನ್ನು ಪಡೆದಿವೆ. ಭಾರತೀಯ ಪರಂಪರೆಯ ಗಾಢವೂ, ಆವೇಶರಹಿತವೂ ಆದ ಪ್ರಜ್ಞೆಯೊಂದಿಗೆ ಪಾಶ್ಚಾತ್ಯ ಸಾಹಿತ್ಯದ ಅಪಾರ ಜ್ಞಾನ ಗೋಕಾಕರ ಮಾತು ಮಾಳ್ಕೆಗಳಿಗೆ ಅತಿಶಯ ಹೊಳಪನ್ನು ನೀಡಿವೆ.

ಅಂತರ್ಮುಖತೆ ಗೋಕಾಕರ ವ್ಯಕ್ತಿತ್ವದ ಮುಖ್ಯ ಲಕ್ಷಣ ವಾಗಿದ್ದರೂ ಅದು ಬಹಿರ್ಮುಖ ಚಟುವಟಿಕೆಗಳನ್ನು ಅಡ್ಡಗಟ್ಟಿಲ್ಲ. ಬದಲು

ಅವುಗಳನ್ನು ಕ್ರಿಯಾ ಸಾಧಕಗೊಳಿಸುವಲ್ಲಿ ಸಹಕಾರಿಯಾಗಿದೆ;

ಮಾರ್ಗದರ್ಶಿಯಾಗಿದೆ. ಇದಕ್ಕೆ ಉದಾಹರಣೆಗಳನ್ನು ಗೋಕಾಕರ ಉದ್ಯೋಗ ಜೀವನದ ಉದ್ದಕ್ಕೂ ಕಾಣಬಹುದು. ಪುಣೆ, ಸಾಂಗ್ಲಿ, ಹೈದರಾಬಾದ್, ವೀಸನಗರ, ಕೊಲ್ಲಾಪುರ, ಧಾರವಾಡ, ಸಿಮ್ಲಾ, ಬೆಂಗಳೂರು, ಪುಟ್ಟಪರ್ತಿಗಳಲ್ಲಿ ಅವರು ಶಿಕ್ಷಣ ಕ್ಷೇತ್ರಕ್ಕೆ ನೀಡಿದ ಅಪೂರ್ವ ಕೊಡುಗೆಗಳು ಸ್ಮರಣೀಯವಾಗಿವೆ; ಅವರ ದೂರದೃಷ್ಟಿ, ಕೌಶಲ್ಯ ಹಾಗೂ ಸಾಮರ್ಥ್ಯಗಳಿಗೆ ಜ್ವಲಂತ ಸಾಕ್ಷಿಗಳಾಗಿವೆ. ಈ ಅನುಭವದೊಂದಿಗೆ ಇಂಗ್ಲೆಂಡ್, ಅಮೇರಿಕ, ಜಪಾನ್ ಮೊದಲಾದ ದೇಶಗಳ ಸಾಹಿತ್ಯ, ಸಂಸ್ಕೃತಿ, ಶೈಕ್ಷಣಿಕ ಪುರೋಭಿವೃದ್ಧಿಗಳ ನೇರ ತಿಳಿವಳಿಕೆ ಅವರ ಮನಸ್ಸನ್ನು ಸಂಪನಗೊಳಿಸಿದ್ದಲ್ಲದೆ, ಉದಾರತೆಯ ಔನ್ನತ್ಯಕ್ಕೆ ಏರಿಸಿದೆ. ಇವೆಲ್ಲ ಪ್ರಭಾವಗಳ ಸತ್ಫಲವನ್ನು ಅವರು ತಮ್ಮ ಭಾಷಣ, ಲೇಖನಗಳಲ್ಲಿ ಕಾಣಿಸಿದ್ದಾರೆ.

ಧಾರವಾಡದ "ಗೆಳೆಯರ ಗುಂಪಿ"ನ ಕ್ರಿಯಾಶೀಲ ಸದಸ್ಯರಾಗಿ. ಬೇಂದ್ರೆಯಂಥ ಕವಿದ್ರಷ್ಟಾರರ ಆಪ್ತಸ್ನೇಹಿತರಾಗಿ ಅವರು ತಮ್ಮ ಮೂರ್ತಿತ್ವವನ್ನು ಹರಿತಗೊಳಿಸಿ ಕೊಂಡದ್ದಲ್ಲದೆ, ಹೊಸ ಲೇಖಕರಿಗೆ ಸತ್ಪ್ರೇರಕರೂ, ದಿಕ್ಸೂಚಿಯೂ ಆದರು. ಕೌಟುಂಬಿಕವಾಗಿಯೂ ಗೋಕಾಕರದು ಪ್ರಶಾಂತ, ನಿರಾಳ ಜೀವನ. ಎಲ್ಲದರಲ್ಲೂ ಹಾಳತ, ಸಮನ್ವಯ, ಅನುದ್ವೇಗಕರ ವಿವೇಚನೆ ಹಾಗೂ ಪೂರ್ಣತೆಯನ್ನು ಬಯಸುವ ಗೋಕಾಕರಿಗೆ, ಈ ಗುಣಗಳು ಇಲ್ಲದಿರುವ ವ್ಯಕ್ತಿಗಳಲ್ಲಿ ಮತ್ತು ಅವಸರದ ಠರಾವುಗಳನ್ನು ಪಾಸುಮಾಡುವವರ ಅಭಿಪ್ರಾಯಗಳಲ್ಲಿ ಸೆಡವಿಲ್ಲ, ಅಸಹನೆಯಿಲ್ಲ. ಅವರವರ ಮನೋರಚನೆಯಂತೆಅವರವರ ವ್ಯಕ್ತಿತ್ವ, ವಿಚಾರವೆಂದು ನುಡಿಯುವ ದೊಡ್ಡತನವಿದೆ. ಪಂತರೆಂಬ ಸಂತರಿಂದ ಹಿಡಿದು ಸವಾನ್‌ಸಿಂಗ್, ಅರವಿಂದ, ಭಗವಾನ್ ಸತ್ಯಸಾಯಿ ಬಾಬಾ ಮುಂತಾದ ಸತ್ಪುರುಷರ ಸಂಪರ್ಕ, ವಿಚಾರಗಳು ಗೋಕಾಕರ ಬಾಳಿನ ಅಮೂಲ್ಯ ನಿಧಿಗಳಾಗಿವೆ. ಕೆಲವರ್ಷಗಳ ಹಿಂದೆ ಇವರ ಅಧ್ಯಕ್ಷತೆಯಲ್ಲಿ ಮೂಡಿಬಂದ ಭಾಷಾವರದಿ ನವಜಾಗೃತಿಯನ್ನೇ ಉಂಟುಮಾಡಿತು. ಕನ್ನಡ ಅಭಿಮಾನದ ಪಾಂಚಜನ್ಯದಂತೆ ಮೊಳಗಿ, ಹಿರಿಯ ಕಿರಿಯರೆಲ್ಲರನ್ನೂ ಭಾಷೆಯ ನಿಮಿತ್ತದಿಂದ ಒಗ್ಗೂಡಿಸಿತು.

ಗೋಕಾಕರ ಮೊದಲ ಕವಿತಾಸಂಗ್ರಹಗಳಲ್ಲಿ 'ಪಯಣ' ಮತ್ತು 'ಕಲೋಪಾಸಕ' ಗಣೀಯವಾಗಿವೆ. ಜೀವನವನ್ನು ಅರ್ಥೈಸಿಕೊಳ್ಳಲು, ಅದರ ಉದ್ದೇಶವನ್ನು ಗ್ರಹಿಸಲು ಕವಿಯ ಮನಸ್ಸು ನಡೆಸಿದ ಹೊಯ್ದಾಟ, ಅಲೆದಾಟಗಳು ಇಲ್ಲಿಯ ಮುಖ್ಯ ಕಾಳಜಿಗಳಾಗಿದೆ. ಚೆಲುವಿನ ಒಲವು ಕಳೆತನದ ಹಂಬಲ, ವಿಯೋಗದ ಪರಿತಾಪ, ಸತ್ಯದ ಬಗೆಗಿನ ಕಳಕಳಿ, ಸೃಷ್ಟಿ ರಮ್ಯತೆಯಂಥ ವಿಷಯಗಳಲ್ಲಿ ಕನಸುಗಾರಿಕೆ, ಶೈಶವಸಹಜ ಮುಗ್ಧತೆ ಢಾಳಾಗಿ ಗೋಚರಿಸುತ್ತವೆ. ಆದರ್ಶದ ಭಾವೋಪಾಸಕರಾಗಿ ಕವಿ, ಸ್ವಪ್ನರಮಣೀಯ ಅವಾಸ್ತವತೆಯಲ್ಲಿ ವಿಹರಿಸುವ ಅನುಭವವಾಗುತ್ತದೆ. ಗೋಕಾಕರು ವಿಲಾಯಿತಿ ಪ್ರವಾಸಕ್ಕೆ ಮುಂಚೆ ಈ ಪದ್ಯಗಳನ್ನು ರಚಿಸಿದ ಅಂಶ ಗಮನಾರ್ಹವಾದದ್ದು. ಸಹಜವಾಗಿಯೇ ಸಾಂಪ್ರದಾಯಿಕತೆ ಇಲ್ಲಿ ಮೇಲುಗೈಯಾಗಿ ಮೆರೆದಿದೆ. ಇಂಗ್ಲೆಂಡಿನಿಂದ ಮರಳಿದ ಬಳಿಕ ಪ್ರಕಟಿತವಾದ 'ಸಮುದ್ರ ಗೀತಗಳು' ಕವನಸಂಕಲನ ಗೋಕಾಕರ ಸ್ಥಿತ್ಯಂತರಕ್ಕೆ ಉತ್ತಮ ನಿದರ್ಶನ ನೀಡುತ್ತದೆ. ಶೈಲಿ, ಧೋರಣೆ, ವಿಷಯ, ತತ್ತ್ವಗಳಲ್ಲಿ ಈ ಕಾಲದ ರಚನೆಗಳಿಗಿಂತ ಅನನ್ಯವಾಗಿದೆ. ಅವರ ಸ್ವಪ್ನಗಾರಿಕೆಯ ಕವಿಚೇತನ, ಪಾಶ್ಚಿಮಾತ್ಯ ವಿಚಾರಗಳ ದೃಷ್ಟಿಕೋನದ ಸ್ಪರ್ಶದಿಂದ ನವೀನವೂ, ಸಮನ್ವಯಮಾರ್ಗಿಯೂ

ಆಯಿತು. ಈ ಕವನ ಸಂಗ್ರಹದಲ್ಲಿ ವಸ್ತು ಮತ್ತು ಅಭಿವ್ಯಕ್ತಿ ಕ್ರಮಗಳು ಕನ್ನಡಕ್ಕೆ ಅತ್ಯಪೂರ್ವವೆನಿಸಿದವು. ಸಮುದ್ರದ ಸೌಮ್ಯ ರೌದ್ರ ಭಂಗಿಗಳು, ಅದರ ಅಮೇಯತೆ ನಿರಂಕುಶತೆಗಳು ತತ್ಕಾಲೀನ ಯುವ ಬದುಕಿನ ಸಂಕೇತವಾದವು. ಸ್ವಚ್ಛಂದ ಛಂದದ ಹೊಸ ಪರಿಯೊಂದು ಕಾಣಿಸಿಕೊಂಡು, ಭಾವನೆಗಳ ವಿಲಾಸ, ಮುಕ್ತತೆಯನ್ನು ಪಡಿಮೂಡಿಸುವಲ್ಲಿ ಅತ್ಯಂತ ಸಮರ್ಥವೆನಿಸಿತು. ಶರಧಿಗೆ ಷಟ್ಪದಿಯ ದೀಕ್ಷೆಯನ್ನು ಕೊಡಲೊಪ್ಪದ ಕಪಿಯ ಭಾವ ವಿಚಾರಗಳ ಹೊಸತನ, ಹಾಸುಬೀಸು ಭೇಷನ್ನಿಸುತ್ತವೆ. 'ಸಮುದ್ರ ಗೀತೆ'ಗಳಲ್ಲಿ ನೀರಿನ ಅನಿಯಂತ್ರಿ ಪ್ರವಾಹತ್ವವಿದ್ದಂತೆ ಮೇಲೆ ಭಾಸವಾದರೂ, ಒಳಗಡೆ ಶಿಲ್ಪದ ಅಚ್ಚುಕಟ್ಟಿನ ಬದಲಾದ ಬಂಧವಿದೆ. 'ಅಭ್ಯುದಯ' ಗೋಕಾಕರ ಸುನೀತಗಳ ಸಂಗ್ರಹ. ಅನುಭವಕ್ಕಿಂತ ವಿಚಾರ, ಅಭಿವ್ಯಂಜನೆಯ ಕೌಶಲಗಳಿಗೆ ಇಲ್ಲಿ ಅವಕಾಶ ಅಧಿಕ. ಮಾರ್ಕ್ಸ್‌ವಾದದ ಬೆನ್ನು ಮೂಳೆಯಿರುವ ಪ್ರಗತಿಶೀಲತೆಯ ಧಾಟಿಧೋರಣೆಗಳು ಇಲ್ಲಿನ ಪದ್ಯಗಳ ಜೀವಾಳ.

'ಬಾಳದೇಗುಲದಲ್ಲಿ' ಗೋಕಾಕರ ಕಾವ್ಯಪ್ರಮಾಣದಲ್ಲಿ ಒಂದು ಮಹತ್ತರ ಮೈಲುಗಲ್ಲು. ಇಲ್ಲಿ ಹಿಂದಿನ ಸ್ವಪ್ನ ಮೋಹಕತೆಯ ಬದಲು, ಕಲ್ಲು ಇಟ್ಟಿಗೆ ಕಾಂಕ್ರೀಟುತನದಿಂದ ಸಿದ್ಧವಾದ ಗಟ್ಟಿಮುಟ್ಟಾದ ವಾಸ್ತುಶಿಲ್ಪ ಹಿನ್ನೆಲೆಯಾಗಿದೆ; ಕಾವ್ಯಾಧಾರವಾಗಿ ನಿಮಿರಿದೆ. ಎಂದೇ ಇದೊಂದು 'ಕವನ ಮಂದಿರ', Portrait Gallery. ಬದುಕು ಒಂದು ದೇಗುಲ; ತಂದೆ ತಾಯಿ ಹೆಂಡತಿ ಮಗು ಕಲಾವಿದ ಅನುಭಾವಿ ಮುಕ್ತಜೀವಿ ಪತಿತ ವಿಜ್ಞಾನಿ ಮೊದಲಾದ ವಿಭಿನ್ನ ಮಾನವ ಮಾದರಿಗಳು ಒಂದು ಹೊಂದುವಳಿಕೆಯಿಂದ ಈ ದೇಗುಲದ ಪ್ರಾಕಾರದಲ್ಲಿ ನೆರೆದಿರುವ ಕಲ್ಪನೆ ಇಲ್ಲಿನ ಪದ್ಯಗಳಲ್ಲಿ ತೆರೆಯಾಡಿದೆ. ಜೀವನದ ವಿವಿಧತೆಯನ್ನು ದರ್ಶಿಸಿದಾಗ ಹೊಮ್ಮುವ ಸೋಜಿಗ ಹಾಗೂ ಜಿಜ್ಞಾಸೆ ಈ ಸಂಗ್ರಹದ ಮೂಲ ಲಕ್ಷಣ. ಇಲ್ಲಿನ ತತ್ತ್ವ ಮಾಗಿದ ವ್ಯಕ್ತಿತ್ವದ ಸಹಜ ಫಲ; ಕಡ ತಂದು ಕೂಡಿಸಿದ್ದಲ್ಲ. 'ಬಾಳದೇಗುಲದಲ್ಲಿ'ಗೆ ಸ್ಫೂರ್ತಿ ಬ್ರೌನಿಂಗ್ ಕವಿಯ 'ಮ್ಯಾನ್ ಅಂಡ್ ವುಮನ್' ಎಂಬ ಕೃತಿ.

ಅನಂತರ ಹೊರಬಂದ 'ಉಗಮ', 'ದ್ಯಾವಾಪೃಥಿವಿ', 'ಕಾಶ್ಮೀರ' ಪದ್ಯ ಸಂಕಲನಗಳು ಚಿಂತನೆಯಿಂದ ಹರವಾದ ಅವರ ವ್ಯಕ್ತಿತ್ವದ ವಿಸ್ತರಣವೆನ್ನಿಸುತ್ತವೆ. 'ದ್ಯಾವಾಪೃಥಿವಿ' ಮಾನವ ಚೇತನದ ಊರ್ಧ್ವಗಾಮಿ ಆಕಾಂಕ್ಷೆಗೆ ಒತ್ತುಕೊಡುತ್ತದೆ. ಇಲ್ಲಿನ 'ಮೋಡ'ದ ಸಂಕೇತ ಬದುಕಿನ ಸಾರ್ಥಕತೆಯ ಉನ್ನತ ಭೂಮಿಕೆಗೆ ಸೂಚನೆಯಾಗಿದೆ. ಲೌಕಿಕ ಅಲೌಕಿಕಗಳು ಸತ್ವಸಮನ್ವಯಕ್ಕೆ ಪ್ರತಿಮೆಯಾಗಿದೆ. 'ಊರ್ಣ ನಾಭ' ಕವನ ಗುಚ್ಛದಲ್ಲಿ ಇಂಥದ್ದೇ ಜಿಜ್ಞಾಸೆಯ ಇನ್ನೊಂದು ಮುನ್‌ಚಾಚನ್ನು ಎದುರುಗೊಳ್ಳುತ್ತೇವೆ. ಚಿಂತನೆ ಭಾವನೆಗಳ ಬಲದಿಂದ ಕಲಾನುಭವವಾಗಿ ಮಾರ್ಪಡುವ ದಿಸೆಯಲ್ಲಿ ಇಲ್ಲಿನ ಹಲವು ಪದ್ಯಗಳು ಸೋತಿವೆ; ರಸಾನುಭವಕ್ಕೆ ಎರವಾಗಿವೆ.

೧೯೬೩ರಲ್ಲಿ ಹೊರಬಂದ 'ತ್ರಿಶಂಕುವಿನ ಪ್ರಜ್ಞಾಪ್ರಭಾತ' ಗೋಕಾಕರು ಹೇಳುವಂತೆ ಮಹಾಕಾವ್ಯದ ಮಿಡಿ ತ್ರಿಶಂಕುವಿನ ಕಥೆ ಆಧುನಿಕ ಮಾನವನ ಹಲವು ಅಂತಸ್ತುಗಳ ವಿಕಾಸ ಪ್ರಜ್ಞೆಗೆ ಪ್ರತಿಮಾಪ್ರಾಯವಾಗಿದೆ ಇಂದಿನ ತ್ರಿಶಂಕುತ್ವದಲ್ಲಿ ಸ್ಮೃತಿ'. ಮೀಮಾಂಸೆ, ಕಲ್ಪನೆಯ ಅಂತಸ್ತುಗಳಿದ್ದು ಬದುಕಿನ ಅತೃಪ್ತಿಗೆ ಮೂಲ ಕಾರಣವಾಗಿವೆ. ಇವನ್ನು ಪ್ರತ್ಯೇಕವಾಗಿ, ಸ್ವಯಂಪೂರ್ಣವಾಗಿ ಕಾಣುವ ದೃಷ್ಟಿಯನ್ನುಳಿದು ಒಟ್ಟಾರೆ ಅಂತಃಸ್ಫುರಣೆ (Intuition)ಯ

ಬೆಳಕಿನಲ್ಲಿ ದರ್ಶಿಸಿದಾಗ ಆಧುನಿಕ ಜೀವನಕ್ಕೆ ಪರಿಪೂರ್ಣತೆ ನಿರಾಳ ಒದಗಬಲ್ಲವು. ಇದಿಲ್ಲವೋ, ಐಂದ್ರಿಯಿಕ ಪ್ರಾಣಿ ಬದುಕೇ ತುಂಬ ವಾಸ್ತವದ್ದಾಗಿ ಪರಿಣಮಿಸುತ್ತದೆ. ಆಧುನಿಕ ಕಾಲದ ಸಮಷ್ಟಿಭಾವನೆ, ಬೆಳವಣಿಗೆಯನ್ನು ಮಾರ್ಮಿಕವಾಗಿ ಚಿತ್ರಿಸುವುದರಿಂದ 'ತ್ರಿಶಂಕುವಿನ ಪ್ರಜ್ಞಾಪ್ರಭಾತ' epic in miniature ಆಗಿದೆ. ಅನೇಕ ದಶಕಗಳ ಅನಂತರ ಗೋಕಾಕರು ರಚಿಸಿದ ಮೇರು ಕೃತಿ 'ಭಾರತಸಿಂಧುರಶ್ಮಿ' ಮಹಾಕಾವ್ಯದ ಹರಿಕಾರವನ್ನಿಸುತ್ತದೆ.

೧೯೫೦ರ ಹೊತ್ತಿಗೆ ಪ್ರಕಟವಾದ 'ನವ್ಯ ಕವಿತೆಗಳು' ಕನ್ನಡ ಕಾವ್ಯೇತಿಹಾಸದ ದೃಷ್ಟಿಯಿಂದ ಗಮನಾರ್ಹ ಘಟ್ಟವಾಗಿದೆ. ಗೋಕಾಕರನ್ನು ನವ್ಯ ಕಾವ್ಯದ ಪ್ರವರ್ತಕರನ್ನಾಗಿಸಿದೆ. ಈ ಸಂಗ್ರಹ, ಕಾವ್ಯಾಭ್ಯಾಸಿಗಳಿಗೆ ಹೊಸ ನೆಲೆಯೊಂದರ ಕಡೆಗೆ ಬೆರಳು ಮಾಡಿ ತೋರಿಸಿತು. ಕವಿಯ ಕಾವ್ಯದ ಬಗೆಗಿನ ಮೂಲ ಕಲ್ಪನೆ, ಪ್ರವೃತ್ತಿಗಳೇ ಇಲ್ಲಿದ್ದರೂ ನವಪರಿಸರದ ಅನುಭವದಿಂದ, ಅಭಿವ್ಯಕ್ತಿಕ್ರಮದಿಂದ ನವ್ಯತೆ ಒಡಮೂಡಿದೆ. ಪರಸ್ಪರ ವಿರುದ್ಧ ಬಗೆಯ ಪ್ರತಿಮೆಗಳ ಬಳಕೆಯಿಂದ ಪದ್ಯಕ್ಕೆ ಅರ್ಥದ ವಿಸ್ತರಣೆ ನೀಡುವ ಪ್ರಯತ್ನ ಇಲ್ಲಿ ಕಾಣಿಸುತ್ತದೆ. ಇದರೊಂದಿಗೆ, ಇಂದಿನ ಗೋಜು ಗೋಜಲಾದ ವಿದ್ಯಮಾನಗಳ ಕಾವ್ಯಾಭಿವ್ಯಕ್ತಿಗೆ ಮನಸ್ಸಿನ ಒಂದು ಪದರಾದ ಅಜಾಗೃತ ಚೇತನವನ್ನು ಸ್ಫೂರ್ತಿ ಕೇಂದ್ರವನ್ನಾಗಿ ಪರಿವರ್ತಿಸಿಕೊಳ್ಳುವ ಅನಿವಾರ್ಯತೆಯನ್ನು ಸ್ವಪ್ನ ತಂತ್ರದ ಉಪಯೋಗದ ಮುಖೇನ ಸೂಚಿಸಲಾಗಿದೆ. ನವ್ಯಕಾವ್ಯದಲ್ಲಿ ಬರುವ ವೈಚಾರಿಕತೆಯ ಔಚಿತ್ಯ ಮೀರಿದ ಬಳಕೆ, ಒಂದು ತೆರನಾದ ನೀತಿಕಾವ್ಯಕ್ಕೆ ನಾಂದಿಯಾಗುವ ಅಪಾಯವನ್ನು ಗೋಕಾಕರು ಅರಿತಿದ್ದಾರೆ. ವರ್ಡ್ಸ್‌ವರ್ತ್‌ನಂಥ ಮಹತ್ಪ್ರತಿಭೆಯ ರೊಮ್ಯಾಂಟಿಕ್ ಕವಿಗೂ ಕೊನೆಕೊನೆಯಲ್ಲಿ ಆದದ್ದು ಈ ಗತಿಯೆ. ಅವನ ರಚನೆಗಳು ಗಪದ್ಯಗಳಾದವು. ಹಿಂದೆ ವಿಜೃಂಭಿಸಿದ್ದ ದರ್ಶನದ ಮಾಂತ್ರಿಕತೆ ಮಾಯವಾಗಿ, ಭಾವದ ಕಾವು ಇಳಿದು, ವಿಚಾರರೂಪದ ಉಪದೇಶ ಮಾತ್ರ ಪದ್ಯಗಳಲ್ಲಿ ಅಟ್ಟಹಾಸ ಮಾಡತೊಡಗಿತು, ಹೀಗಿದ್ದಾಗ್ಯೂ ರಮ್ಯ ಕಾವ್ಯಕ್ಕಿಂತ ವೈಚಾರಿಕ ಅಂಶ ಹೆಚ್ಚಾಗಿರುವ ನವ್ಯಕಾವ್ಯ ಯಾವುದನ್ನೂ ತನ್ಮಯತೆ, ಭಾವನಿರ್ಭರತೆಯ ಹಂತದಲ್ಲಿ-ಸರಳೀಕರಿಸದೆ, ಚಿಂತನೆಯ ನಿರಾಳಸಾವಕಾಶತೆಯಲ್ಲಿ ವಾಸ್ತವತೆಯ ಜಟಿಲ ಮುಖಗಳನ್ನು ಮುಂದಿಡುತ್ತದೆ. ಬುದ್ಧಿ ಹಾಗೂ ಭಾವನೆಯ ಕ್ರಿಯೆಯನ್ನು ದರ್ಶನವೊಂದು ಹಿನ್ನೆಲೆಯಲ್ಲಿ ನಿಂತು ಸಚೇತನ ಗೊಳಿಸುತ್ತಿರುತ್ತದೆ. ಹಲವು ಸಲ ಭಾವನೆ, ಬುದ್ಧಿಯ ಘರ್ಷಣಕ್ಕೆ ಸಿಕ್ಕಿ, ಸರಸ್ವತೀ ನದಿಯಂತೆ ಗುಪ್ತಗಾಮಿನಿಯಾಗುವುದು ದಿಟವಾದರೂ, ಅದರ ತರಂಗತಾಡನದ ಅಚ್ಚೊತ್ತುಗಳನ್ನು ಉಳಿಸಿ ತನ್ನ ಅಸ್ತಿತ್ವವನ್ನು ಸಾರಿಕೊಳ್ಳುತ್ತದೆ. ಗೋಕಾಕರ ಪ್ರಕಾರ ನವ್ಯಕಾವ್ಯದ ಮತ್ತೊಂದು ಪ್ರಮುಖ ಲಕ್ಷಣವೆಂದರೆ ಶಬ್ದೋಪಾಸನೆ. ಇದಕ್ಕೂ ಒಂದು ಮಿತಿಯುಂಟು. ಶಬ್ದಕ್ರೀಡೆಯಲ್ಲಿ ಖುಷಿಗೊಳ್ಳುವ, ಶಬ್ದಗಳೊಡನೆ ಗುದುಮುರಿಗೆ ಹಾಕಿ ಮೋಜು ಪಡೆಯುವ ಪದ್ಯರಚಕ ನವ್ಯ ಕಾವ್ಯವನ್ನು ಹೇಳಿಕೆಗಳ ಹೇಳಿಗೆಯನ್ನಾಗಿ ಮಾರ್ಪಡಿಸಿದರೆ, ಶಬ್ದ ತಪಸ್ವಿ ಅದನ್ನೊಂದು ರಮ್ಯೋದ್ಯಾನವನ್ನಾಗಿ ಪರಿವರ್ತಿಸಬಲ್ಲ. ಗೋಕಾಕರು ೧೯೫೦ರಲ್ಲಿ ಮುಂಬಯಿಯಲ್ಲಿ ಮಾಡಿದ ಕಾವ್ಯೋಪನ್ಯಾಸದಲ್ಲಿ ನವ್ಯ ಕವಿತೆಯನ್ನು ಕುರಿತಂತೆ 'ನೆಲ್ಲಿಪಾಕ' ಎಂದಿದ್ದರು. ರಮ್ಯ ಅಥವಾ ನವೋದಯ ಕಾವ್ಯದ್ದು 'ದ್ರಾಕ್ಷಾಪಾಕ'. ಇದರ ಸವಿ ತತ್ಕಾಲಕ್ಕೇ ಅನುಭವ

ವಾಗುವಂಥದ್ದು. ನೆಲ್ಲಿಕಾಯಿಯನ್ನು ತಿಂದಾದ ಮೇಲೆ, ಗುಟುಕು ನೀರನ್ನು ಕುಡಿದಾಗಲೇ ಅದರ ಮಾಧುರ್ಯ ಮನೋವೇದ್ಯವಾಗುವಂಥದು.

ಗೋಕಾಕರ ದೃಷ್ಟಿಯಲ್ಲಿ ನವ್ಯ ಕಾವ್ಯ ಆಧುನಿಕ ಇಲ್ಲವೆ ರೊಮ್ಯಾಂಟಿಕ್ ಕಾವ್ಯದ ಸಾರಾಸಗಟು ಧಿಕ್ಕಾರವಲ್ಲ; ಅದರ ಸಹಜ ಹಾಗೂ ಅನಿವಾರ್ಯವಾದ ಬೆಳವಣಿಗೆ, ಬಡಾವಣೆ. ಕಾವ್ಯಕ್ಕೆ ಬೌದ್ಧಿಕ, ಮಾನಸಿಕ ನಿಲವಿನಿಂದ ವೀಕ್ಷಿಸಿದ ಸತ್ಯವೇ ಪೂರ್ಣವಲ್ಲ. ಅಂತರ್ದೃಷ್ಟಿಯಿಂದ ಗೃಹೀತವಾದ ಸತ್ಯವೇ ಕಾವ್ಯದ ಆತ್ಮ. ವ್ಯಕ್ತಿನಿಷ್ಠವಾಗಿ ಅದು ನಿರೂಪಿತವಾಯಿತೆ, ಕಾವ್ಯ ರೊಮ್ಯಾಂಟಿಕ್ ಅಥವಾ ರಮ್ಯವೆನ್ನಿಸಿಕೊಳ್ಳುತ್ತದೆ. ವಸ್ತುನಿಷ್ಠವಾಯಿತೊ, ನವ್ಯ ಮಾದರಿಯದಾಗುತ್ತದೆ. ಅವರಿಗೆ ನವ್ಯಕಾವ್ಯ, ಹೊಸ ಸೃಷ್ಟ್ಯಾತ್ಮಕ ಪಂಥವೆನ್ನಿಸದು. It is a critical credo wich accepts all genuine poetry. ಗೋಕಾಕರ ಈ ವಿಚಾರ ಧಾರೆಗೆ ವಿಧೇಯ ರೀತಿಯ ಕಾವ್ಯವೂ ಕೆಲವರಿಂದ ರಚಿತವಾಗಿದೆ; ಆದರೆ ಅದು ವಿಮರ್ಶಕರಿಂದ ಹಾರ ಹಾಕಿಸಿಕೊಂಡದ್ದು ಕಡಿಮೆ. ಕನ್ನಡದಲ್ಲಿ ನವ್ಯ ಕಾವ್ಯದ ಅವಶ್ಯಕತೆಯ ಬಗ್ಗೆ ಕವಿ, ವಿಮರ್ಶಕರಲ್ಲಿ ವಾದವಿವಾದದ ಸುಂಟರಗಾಳಿಯೇ ಎದ್ದಿತ್ತು. ಆಗ್ಗ ಗೋಕಾರ ನಿಲವು ನೆಲಕ್ಕೆ ನೆಟ್ಟ ಹಾರೆಯಂತೆ. ಏಕೋದೃಢ ಹಾಗೂ ಸುಸ್ಥಿರವಾಗಿತ್ತು. ರೊಮ್ಯಾಂಟಿಕ್ ಕಾವ್ಯ ಸಾರ್ಥಕ ಕೆಲಸ ಮಾಡಿದ ಬಳಿಕ ಒಂದು ಪದ್ಧತಿ, ಚಾಳಿಯಾಗಿ ಹೊಂಡಗಟ್ಟಿತು; ಹಿಂದಿನವರ ಪುನರುಚ್ಚಾರ ಕವಿಗಳ ಮಂತ್ರವಾಗತೊಡಗಿತು. ಇದರ ಅರಿವಿನಿಂದ ಉದ್ದೀಪ್ತನಾದ ಕವಿ ತನ್ನ ಆತ್ಮತೃಪ್ತಿಗೆ ಹೊಸ ನೆಲೆಗಳನ್ನು ಹುಡುಕಿ ಸಾಗುವುದು ಅನಿವಾರ್ಯವಾಯಿತು. ಇದು ಯಾರೋ ಒಬ್ಬಿಬ್ಬ ಕವಿಗಳ ವೈಯಕ್ತಿಕ ತುರ್ತಿನ ಫಲವಲ್ಲ; ಕನ್ನಡ ಕಾವ್ಯದ ಆಂತರಿಕ ಅವಶ್ಯಕತೆಯೇ ತಂತಾನೆ ಸಹಜವಾಗಿ ಪ್ರಾಪ್ತಿಸಿಕೊಂಡ ಮಾರ್ಗ, ಕಂಡ ಬೆಳವಣಿಗೆ. ಸ್ವಾತಂತ್ರೋತ್ತರ ಕಾಲದಲ್ಲಿ ದೇಶವ್ಯಾಪಿಯಾಗಿರುವ ಉನ್ನತಾದರ್ಶಗಳ, ಮಾನವೀ ಮೌಲ್ಯಗಳ ಮಾನಭಂಗದ ಅರಿವು 'ನವ್ಯ ಸಂವೇದನೆ'ಗೆ ಮೂಲವೆಂದು ಗೋಕಾಕರು ಭಾವಿಸುವುದಿಲ್ಲ. ಸ್ವಾತಂತ್ರ್ಯಾ ನಂತರದ ಆಗುಹೋಗುಗಳಿಂದಾದ ಭ್ರಮನಿರಸನ ನವ್ಯಪ್ರಜ್ಞೆಗೆ ಪ್ರೇರಣೆಯೆನ್ನುವುದಾದರೆ, ಆ ದಾರುಣಾನುಭವ ಕುವೆಂಪು, ಬೇಂದ್ರೆ, ಪುತಿನರಂಥ ಅನೇಕರಿಗೂ ಆಗಿದೆಯಲ್ಲ. ಆದರೆ ಅವರು ನವ್ಯ ಕಾವ್ಯ ವಿಧಾನವನ್ನು ಹಿಡಿಯಲಿಲ್ಲ. ಎಂದೇ ದೇಶವಿಮೋಚನೆಯ ಬಳಿಕದ ಅಧ್ವಾನ ಅವಾಂತರಗಳು ಉಂಟು ಮಾಡಿದ 'ಸಂವೇದನೆ' ನವ್ಯ ಪಂಥಕ್ಕೆ ಬೀಜ ಪ್ರಾಯವೆನ್ನುವ ಮಾತು ತಪ್ಪು. ಇದರ ಜೊತೆಗೆ ಸ್ವಾನುಭವದ ಅಗ್ಗದ ಅವಾಸ್ತವ ಸಿದ್ಧಾಂತಗಳಿಂದ ಕೈತೊಳೆದುಕೊಂಡು ಮತ್ತೆ ನೆಲದಲ್ಲಿ ಬೇರೂರಿ ಬದುಕಲಿಕ್ಕೆ ನವ್ಯ ಮಾರ್ಗ ರೂಪಿತವಾಗಿರ ಬಹುದೆ? ಇದಕ್ಕೆ ಗೋಕಾಕರ ಪ್ರತಿಕ್ರಿಯೆ : 'ಉಹುಂ'. ಅನುಭಾವಿ, ವೇದಾಂತಿ, ದ್ರಷ್ಟಾರರ (ರಾಮಕೃಷ್ಣಪರಮಹಂಸ, ಅರವಿಂದ ಇತ್ಯಾದಿ) ಅನುಭೂತಿಗಳು ನಮಗಾಗದಿದ್ದರೆ ಅವು ಸುಳ್ಳೆಂದೊ. ನಂಬಲು ಅನರ್ಹವೆಂದೋ ಹೇಳಲಿಕ್ಕೆಬಾರದು. ಕಾವ್ಯದಲ್ಲಿ ಮಣ್ಣಿನ ವಾಸನೆ ಮೂಡಿಸಬೇಕೆಂಬ ಹಂಬಲದಿಂದ ನವ್ಯ ಕಾವ್ಯ ಪ್ರಾರಂಭವಾಯಿತೆಂಬುದು ಒಂದು ಕಾಕತಾಳೀಯವಷ್ಟೆ.

ಗೋಕಾಕರು ಪ್ರಯೋಗಪ್ರಿಯರು ನಿಜ. ಇಂಗ್ಲಿಷ್ ಸಾಹಿತ್ಯದ ಅಧ್ಯಯನ ಮಾಡಿದವನಿಗೆ

ಪ್ರಯೋಗಪ್ರಿಯತೆಯಿಂದ ತಪ್ಪಿಸಿಕೊಳ್ಳುವುದು ಶಕ್ಯವಿಲ್ಲದ ಮಾತು. ಆದರೆ, ಅವರೇ ಹೇಳಿದಂತೆ: I am not a juggler playing wih three balls. ಅವರ ಪ್ರಕಾರ 'ಸಮುದ್ರ ಗೀತೆಗಳು' ಆಂತರಿಕ ಅವಶ್ಯಕತೆಗೆ ನಿದರ್ಶನವಾದರೆ, 'ಇಂದಿಲ್ಲ ನಾಳೆ' ಎನ್ನುವ ಸಂಗ್ರಹದ ಎಲೆಕ್ಟ್ರಾನಿಕ್ ಸಂಗೀತವನ್ನು ಕುರಿತ ಪದ್ಯ ಪ್ರಯೋಗಪ್ರಿಯತೆಗೆ ಸಾಕ್ಷಿ. ಅಡಿಗರ ಕಾವ್ಯವಿಧಾನದಿಂದ ಗೋಕಾಕರ ಕಾವ್ಯ ಹೇಗೆ ಭಿನ್ನ? ಭಾವತೀವ್ರತೆ, ಸ್ವೋಪಜ್ಞತೆಯ ಹಂಬಲಿಕೆ ಅಡಿಗರ ಉತ್ಕಟ ಕಾಳಜಿಗಳು, ಸಹಜಧರ್ಮ.ಅಡಿಗರ 'ಚಂಡ ಮದ್ದಳೆ' ನವ್ಯ ಕವನ ಸಂಗ್ರಹದಲ್ಲಿದ್ದ ಮೆಣಸು ಹುಣಸೆ ಹಾಗಲಗಳು ಅವರ ಅನಂತರದ ಸಂಕಲನಗಳಾದ 'ಭೂಮಿ ಗೀತ' ಮತ್ತು ಇತರ ಕವನಗಳಲ್ಲಿ ಕಡಿಮೆಯಾಗಿವೆ. ಅತ್ಯಾಪ್ತತೆಯಿಂದ, ಹೆಚ್ಚಿನ ಉದ್ವೇಗವಿಲ್ಲದೆ ಬದುಕಿನ ಕೌಶಲವನ್ನು ಅಡಿಗರ ಕಾವ್ಯವಾಣಿ ವಿಚಾರಿಸಹತ್ತಿರುವುದು ಅವರ ವಿಕಾಸ ಪ್ರಿಯ ವ್ಯಕ್ತಿತ್ವಕ್ಕೆ ಹಿಡಿದ ಕೈಗನ್ನಡಿಯಾಗಿದೆ. ಅಡಿಗರ ಬರವಣಿಗೆಯನ್ನು ಕುರಿತು ಗೋಕಾಕರು ಹಿಂದೊಮ್ಮೆ ಅಡಿಗ ಮಾತುಗಳು ಹೀಗಿವೆ: "ಅಡಿಗರು ಶಕ್ತಿಯುತ ಕವಿ. ವೈಯಕ್ತಿಕ ನಿರಾಶಾವಾದ ಮತ್ತು ಮಾನವತಾವಾದವನ್ನು ಬಹು ಚೆನ್ನಾಗಿ ಚಿತ್ರಿಸುತ್ತಾರೆ. ಅವರಿಗೂ ನನಗೂ ವ್ಯತ್ಯಾಸವಿರುವುದು ಭಗ್ನ ಪ್ರತಿಮೆಗಳ ಮತ್ತು ಸಾವಯವ ಶಿಲ್ಪದ ಬಳಕೆಯಲ್ಲಿ. ಇವೆರಡೂ ನನಗೆ ಮೆಚ್ಚಿಗೆಯಾಗಿಲ್ಲ. ಇವುಗಳನ್ನು ಪ್ರತಿ ಪದ್ಯದ ಸಾಲಿನಲ್ಲೂ ಒಂದು ಅಗತ್ಯವೆಂಬಂತೆ ತರುವುದರಿಂದ ಅನವಗಾಹತೆ (Obscurity) ಹುಟ್ಟುತ್ತದೆ."

ಗೋಕಾಕರು ಶ್ರೇಷ್ಠ ವಿಮರ್ಶಕರು. 'ಕವಿ ಕಾವ್ಯ ಮಹೋನ್ನತಿ', 'ನವ್ಯತೆ ಹಾಗೂ ಕಾವ್ಯ ಜೀವನ', ಇನ್ನೂ ಅನೇಕ ವಿಮರ್ಶನ ಕೃತಿಗಳನ್ನು ಬರೆದಿದ್ದಾರೆ. ವಿಮರ್ಶಾ ವಿಚಾರಗಳಲ್ಲಿ ಆರೋಗ್ಯಕರ ದೃಷ್ಟಿ, ವಿಷಯ ಪ್ರತಿಪಾದನೆಯಲ್ಲಿ ನಿಸ್ಸಂದಿಗ್ಧತೆ, ಅವಿಚ್ಛಿನ್ನತೆ ಮತ್ತು ಆಳವಾದ ಓದು–ಗೋಕಾಕರ ಸಹಜ ಲಕ್ಷಣಗಳು. ಅವರಿಗೆ ಪಾಕ್ಷಿಕ ವಿಮರ್ಶೆಯನ್ನು ಕಂಡರಾಗದು. ಪ್ರಸಿದ್ಧಿಗಾಗಿ ಅಕಾರಣ ದೂಳೆಬ್ಬಿಸುವಿಕೆ, ಹಲ್ಮಸೆತಗಳು ಅವರಿಗೆ ಅಪಥ್ಯ. ಎಂದೇ ವಾದವಿವಾದ ಗಳಲ್ಲಿ ಅವರು ಪಾಲ್ಗೊಂಡ ಪ್ರಸಂಗಗಳು ಕಡಿಮೆ.

'ಸಮರಸವೇ ಜೀವನ' ಎಂಬ ಸಾವಿರದ ಇನ್ನೂರು ಪುಟಗಳ ಕಾದಂಬರಿ ಕನ್ನಡ ಗದ್ಯಕ್ಷೇತ್ರದ ಜಲ ಚಿಹ್ನೆಯಾಗಿದೆ. ಉತ್ತರ ಕರ್ನಾಟಕದ ಜನಜೀವನದ ಸರ್ವಾಂಗೀಣ ಬೆಳವಣಿಗೆಯನ್ನು ಅಂತಸ್ಸತ್ವವನ್ನು ಸಮಗ್ರವಾಗಿ ನಿರೂಪಿಸುವ ಈ ಬೃಹತ್ಕೃತಿ ೧೯೩೭ರಲ್ಲಿ ಪ್ರಾರಂಭಗೊಂಡು, ಕಾರಣಾಂತರದಿಂದ ಮುಂದುವರೆಯದೆ, ಆಮೇಲೆ ೧೯೫೬ರಲ್ಲಿ ಪೂರ್ತಿ ಯಾಯಿತು. ಮೊದಲಿಗೆ 'ಇಜ್ಜೋಡು', 'ಅಂತಃಸತ್ವ' ಇತ್ಯಾದಿ ಬಿಡಿ ಭಾಗಗಳಲ್ಲಿ ಪ್ರಕಟವಾಗಿ ಜನಾದರಣೀಯವಾಯಿತು. ನಾಲ್ಕು ಪೀಳಿಗೆಗಳ ಜೀವನಚಿತ್ರ ಇಲ್ಲಿ ಕಾಣುತ್ತದೆ. ಟಾಲ್‌ಸ್ಟಾಯನ ಕಾದಂಬರಿಗಳಿಗಿರುವ ಹರಹು, ಹಸೆ 'ಸಮರಸವೇ ಜೀವನ'ಕ್ಕಿದೆ ಎಂದರೆ ಅತ್ಯುಕ್ತಿಯಾಗದು.

ಲೇಖಕರು ಇದನ್ನು ಮಹಾಕಾದಂಬರಿ ಎಂದು ಕರೆದಿರುವ ಔಚಿತ್ಯ ಹೀಗಿದೆ: "ಪಲು ವ್ಯಕ್ತಿಗಳ ಜೀವನ ವಿಕಾಸ ಈ ಕಾದಂಬರಿಯಲ್ಲಿದೆ. ಪ್ರತ್ಯೇಕವೂ, ಸರ್ವ ಸ್ವತಂತ್ರವೂ ಆದ ಕಾದಂಬರಿಯ ನಾನಾ ಪ್ರಕಾರಗಳಾದ ಘಟನೆ, ಕಥೆ, ಪಾತ್ರ, ಶೈಲಿ, ತತ್ತ್ವ, ರಸದಂಪ

ಪ್ರಧಾನಾಂಗಗಳೆಲ್ಲ ಒಂದು ಸಮರಸ ಸ್ಥಿತಿಯಲ್ಲಿ ಬೆಸೆದುಕೊಂಡಿವೆ. ಆದ್ದರಿಂದ ಇದು ಸರ್ವಾಂಗಪೂರಿತ ಕಾದಂಬರಿ. ಈ ದೃಷ್ಟಿಯಿಂದ ಇದೊಂದು Epic Novel". ವಿಮರ್ಶಕರು ಈ ಕಾದಂಬರಿಗೆ ಸಹಜವಾಗಿ ದಕ್ಕಬೇಕಾದ ಮಾನ್ಯತೆಯ ಪಾಲನ್ನು ಕೊಡದಿರುವುದರ ಬಗ್ಗೆ ಗೋಕಾಕರಿಗೆ ಅಸಮಾಧಾನವಿದೆ. ಈ ಕಾದಂಬರಿಯ ಮುಖೇನ ಅವರು ಸೂಚಿಸ ಬಯಸುವ ಕಾಣ್ಕೆ ಯಾವುದು? ಮೊದಲಿನಿಂದ ಕೊನೆಯತನಕ ಸಮರಸ ಮತ್ತು ವೈಷಮ್ಯಗಳ ಎಳೆಗಳು ಪಾತ್ರಗಳಲ್ಲಿ ಸನ್ನಿವೇಶಗಳಲ್ಲಿ ಹಾಸುಹೊಕ್ಕಾಗಿವೆ. ಇವು ಹಲವು ಪದರುಗಳಲ್ಲಿ ಅಥವಾ ಮಜಲುಗಳಲ್ಲಿ ವ್ಯಕ್ತವಾಗುತ್ತವೆ. ಕೌಟುಂಬಿಕ ಪರಿಸರದಲ್ಲಿನ ವೈಷಮ್ಯ ಹಾಗೂ ಸಮರಸಗಳೊಂದಿಗೆ, ಅಂತರ್ಪ್ರಾಂತೀಯ, ಅಂತರ್‌ರಾಷ್ಟ್ರೀಯ ಸಾರ್ವತ್ರಿಕ ವೈಷಮ್ಯ ಹಾಗೂ ಸಮರಸಗಳ ಕಾಣ್ಕೆ ಚಿತ್ರಿತವಾಗಿದೆ. ಉದಾಹರಣೆಗೆ ಅಂತರಾಷ್ಟ್ರೀಯ ಪರಿಸರವನ್ನೇ ತೆಗೆದುಕೊಳ್ಳಿ. ಇಂಡಿಯ ಮತ್ತು ಇಂಗ್ಲೆಂಡಿನ ಸಂಬಂಧದ ವೈಷಮ್ಯ ಅನೇಕ ಅಧಿಕಾರಿಗಳ ನಡವಳಿಕೆಯಲ್ಲಿ ಅಚ್ಚೊತ್ತಿದೆ. ಅವುಗಳ ಸಾಮರಸ್ಯವನ್ನು ಶೀನು ಮತ್ತು ಆ್ಯಲಿಸ್ ಎಂಬುವರ ಪಾತ್ರಗಳಲ್ಲಿ ಮನಗಾಣಬಹುದು. ಆಂತರಂಗಿಕ ಮತ್ತು ಸಾಮಾಜಿಕ ಪ್ರಜ್ಞೆಗಳ ವಿಕಸನದ ಸಮನ್ವಯಕ್ಕೆ ನಿದರ್ಶನಗಳು ಕಾದಂಬರಿಯ ತುಂಬೆಲ್ಲ ಹರಡಿಕೊಂಡಿವೆ. ಈ ಎರಡು ಪ್ರಜ್ಞೆಗಳೂ ಅತ್ಯಂತ ವಿಪುಲ ಪ್ರಮಾಣದಲ್ಲಿ ಕಾದಂಬರಿಯ ಅಂತಿಮ ಭಾಗವಾದ 'ನರಹರಿ'ಯಲ್ಲಿ ಕಾಣಸಿಗುತ್ತದೆ. ಈ ಕಾದಂಬರಿಯನ್ನು ಕುರಿತು ಬರೆಯುವಾಗ, ವೈಚಾರಿಕತೆಯನ್ನು ಕುರಿತ ಗೋಕಾಕರ ವಿಚಾರಗಳನ್ನು ಪ್ರಸ್ತಾಪಿಸುವುದು ಪ್ರಸ್ತುತ ಹಾಗೂ ಲಾಭಕರವೆನ್ನಿಸುತ್ತಿದೆ. ಕಾದಂಬರಿಗೆ ವೈಚಾರಿಕ ಅಂಶಗಳು ಎಷ್ಟು ಸಂಗತ? ಈಚೆಗೆ ಕಾದಂಬರಿಯಲ್ಲಿ ಚಿತ್ರಣ ಹೆಚ್ಚಿರಬೇಕು. ತಾತ್ತ್ವಿಕ ವಿವೇಚನೆ ಅಥವಾ ನಿರೂಪಣೆ ಇರಬಾರದು ಎಂಬ ವಾದ ಬಲಗೊಳ್ಳುತ್ತಿದೆ. ಕೆಲವರಲ್ಲಿ ಮತ್ತೊಂದು ವಿರೋಧಾಭಾಸವೂ ಇದೆ. ಸೋಷಿಯಲಿಜಂ, ಮಾರ್ಕ್ಸಿಸಂ, ಎಕ್ಸಿಸ್ಟೆನ್‌ಷಿಯಲಿಸಂ, ಲೋಹಿಯಾಯಿಸಂ ಇತ್ಯಾದಿ 'ಇಸಂ'ಗಳ ಚರ್ಚೆಯನ್ನು ಕಾದಂಬರಿಯ ಹಿನ್ನೆಲೆಯಲ್ಲಿ ನಡೆಸುತ್ತಾರೆ. ಇವುಗಳನ್ನು ಮನಃಪೂರ್ವಕವಾಗಿ ಕಾದಂಬರಿಗಳಲ್ಲಿ ಬರಮಾಡಿಕೊಂಡು, ಇನ್ನೊಬ್ಬರ ಕೃತಿಗಳಲ್ಲಿ ಅನುಭಾವವೊ, ದರ್ಶನವೊ, ಅರವಿಂದರ ವಿಚಾರವೊ ಬಂದರೆ ಮೂಗು ಮುರಿದು ಅಪಪ್ರಚಾರ ಮಾಡುವ ಲೇಖಕ ವಿಮರ್ಶಕರೂ ಇಲ್ಲದಿಲ್ಲ. ಕೇಂದ್ರದರ್ಶನವೊಂದಕ್ಕೆ ಇತರ ಅಂಗಗಳಂತೆ ವೈಚಾರಿಕತೆಯೂ ಅಧೀನವಾಗಿ ಬಂದಾಗ ಅದಕ್ಕೆ ಸ್ವಾಗತವಿದೆ. 'ಸಮರಸವೇ ಜೀವನ'ದಲ್ಲಿ ಆ ಕಾಲದ ನಾಗರಿಕ ಹಾಗೂ ಗ್ರಾಮೀಣ ಸಂಸ್ಕೃತಿಯ ವಿಚಾರ ವಿವೇಚನೆಯಿದೆ. ಕಾಮ-ಪ್ರೇಮ, ಪುರುಷ-ಮಹಿಳೆಯರ ಸಂಬಂಧ, ಮದುವೆಗಳ ನೈತಿಕ ಬುನಾದಿ, ವ್ಯಕ್ತಿತ್ವ ವಿಕಸನ, ಕಾವ್ಯಮೀಮಾಂಸೆ, ಅನುಭಾವ, ಆಂತರಂಗಿಕ ಹಾಗೂ ಸಾಮಾಜಿಕ ದೃಷ್ಟಿಯ ಸಮನ್ವಯ-ಈ ವಿಚಾರಗಳೆಲ್ಲ ಇವೆ; ಆದರೆ ಆನುಷಂಗಿ ಕವೆಂಬಂತೆ, ಸಂದರ್ಭಾನುಗುಣವಾಗಿ ವ್ಯಕ್ತವಾಗುತ್ತವೆ. ವೈಚಾರಿಕತೆ ಪಾತ್ರಗಳ ಮೂಲಕ ಹೊಮ್ಮಿರುವುದನ್ನೂ 'ಸಮರಸವೇ ಜೀವನ'ದಲ್ಲಿ ಕಾಣುತ್ತೇವೆ. ಪ್ರಜಾಪ್ರಭುತ್ವವಾದ, ಸಾಮ್ರಾಜ್ಯವಾದ, ಮಾನವತಾವಾದ, ಮಾರ್ಕ್ಸ್‌ವಾದ ಇತ್ಯಾದಿ ವಿಚಾರಗಳನ್ನು ಪ್ರತಿನಿಧಿಸುವ ಪಾತ್ರಗಳು ಇವೆ. ಕೆಲವು ಪ್ರಕರಣಗಳಿಂದಲೂ ವೈಚಾರಿಕತೆ ಮೂಡುವುದುಂಟು.

'ಸಹಸ್ರಶೀರ್ಷನಾದ ಸಮಾಜ ಪುರುಷ' ಮತ್ತು 'ಪೂರ್ಣ ಜೀವನ ಕೇಂದ್ರ' ಎಂಬ ಪ್ರಕರಣಗಳೇ ಇದಕ್ಕೆ ಪುರಾವೆ.

ವೈಚಾರಿಕ ನೆಲಗಟ್ಟಿರುವಂತೆ, 'ಸಮರಸವೇ ಜೀವನ'ದಲ್ಲಿ ಪ್ರಾದೇಶಿಕ ತಪ್ಶೀಲುಗಳೂ ಇಡಿಕಿರಿದಿವೆ. ಪ್ರಾದೇಶಿಕತೆಯಿಂದ ಕಾದಂಬರಿಗೆ ಅಪೂರ್ವ ಮೂರ್ತಿಮಂತತೆ ದಕ್ಕುತ್ತದೆ. ಯಾವುದೇ ಕಥಾನಕ ಒಂದು ವಿಶಿಷ್ಟ ಪಾತ್ರ ಸಮುದಾಯವನ್ನು ಅವಲಂಬಿಸಿದಾಗ, ಅದು ಶೂನ್ಯದಲ್ಲಿ ಇಲ್ಲವೆ ನೀಲಾಕಾಶದಲ್ಲಿ ಮೂಡುವುದಿಲ್ಲ. ಅದಕ್ಕೆ ಆಯಾ ಕಾಲದೇಶಗಳಿಗೆ ಅನುಗುಣವಾಗಿ Local habitation and a name ಬೇಕಾಗುತ್ತದೆ. ಅದಿಲ್ಲದೆ ಕಥಾನಕಕ್ಕೆ ಆಪ್ತತೆ ಒದಗದು; ಅದು ಅಂತರಬೆಂತರವಾದೀತು. 'ಸಮರಸವೇ ಜೀವನ'ದಲ್ಲಿ ಪ್ರಾದೇಶಿಕತೆ, ಭೌಗೋಳಿಕ ಹಿನ್ನೆಲೆಯ ವಿಸ್ತೃತ ಚಿತ್ರಣದ ಮೂಲಕ ಹೊಮ್ಮುತ್ತದೆ. ವರದಾ ನದಿಯ ಹಾಗೂ ಕೃಷ್ಣಾ ನದಿಯ ಪ್ರದೇಶ, ತೋಟಗಳ ಊರಾದ ಮೊಗ್ಗಾವಿ, ಪ್ರಾಂತ್ಯವೊಂದರ ರಾಜಧಾನಿಯಾಗಿದ್ದ ಪುಣೆ–ಇವುಗಳ ವಿಶಿಷ್ಟ ಜೀವನ ಶೈಲಿಯ ಸ್ಥಳೀಯ ಚಿತ್ರಣದ ಮೂಲಕ ಪ್ರಾದೇಶಿಕ ವಿವರಗಳು ಮೂಡಿವೆ. ಇದೇ ಬಗೆಯಲ್ಲಿ ಸಮುದ್ರ ಪರಿಸರ, ಲಂಡನ್, ಆಕ್ಸ್‌ಫರ್ಡ್, ಜರ್ಮನಿಯ ಬ್ಲಾಕ್ ಫಾರೆಸ್ಟ್, ಇಂಗ್ಲೆಂಡಿನ ಲೇಕ್ ಡಿಸ್ಟ್ರಿಕ್ಟ್, ಹಿಮಾಲಯ ಯಾತ್ರೆ–ಮುಂತಾದವುಗಳ ವರ್ಣನೆಯ ಮುಖಾಂತರ ಪ್ರಾದೇಶಿಕತೆ ತನ್ನ ವೈವಿಧ್ಯದಲ್ಲಿ ಒಡಮೂಡಿದೆ.

ಈ ಸಂದರ್ಭದಲ್ಲಿ ಗೋಕಾಕರ ಸಮನ್ವಯ ಸಿದ್ಧಾಂತದ ಬಗ್ಗೆ ಒಂದೆರಡು ಮಾತುಗಳನ್ನು ಆಡುವುದು ಉಚಿತವೆನ್ನಿಸುತ್ತದೆ. ಸಾಹಿತ್ಯ ರಚನೆಯ ಮೊದಲಿನಿಂದ ಅವರ ಆಲೋಚನೆ, ಕ್ರಿಯಾಶೀಲತೆಯನ್ನು ಈ ಸಿದ್ಧಾಂತ ರೂಪಿಸುತ್ತ ಬಂದಿದೆ. ಹೀಗಾಗಿ ಅದು ಅವರ ಬದುಕಿನಲ್ಲಿ ಒಂದು ಪ್ರವೃತ್ತಿಯಂತೆ ನೆಲೆಗೊಂಡಿದೆ; ಬಲಗೊಂಡಿದೆ; ಅವರ ಬರವಣಿಗೆಗಳ ಹೃದ್ಭಾಗವೆಂದರೂ ತಪ್ಪಾಗದು. 'ಸಮರಸವೆ ಜೀವನ', 'ಬಾಳ ದೇಗುಲದಲ್ಲಿ' ಮತ್ತು 'ಯುಗಾಂತರ' ಹೆಸರಿನ ನಾಟಕದಲ್ಲಿ ಈ ಸಮನ್ವಯವನ್ನು ರೂಢಿಸಿಕೊಂಡ ವ್ಯಕ್ತಿತ್ವದ ತುಡಿತವನ್ನು ಅನುಭವಿಸಬಹುದು. ಈ ಸಿದ್ಧಾಂತದ ತಿರುಳು ಹೀಗಿದೆ : ವ್ಯಕ್ತಿತ್ವ ಅನೇಕ ಮುಖಿಯಾಗಿದ್ದರೂ ಅದರಲ್ಲಿ ಸಹಜಸಿದ್ಧವಾದ ಅನ್ವಯ ಏರ್ಪಡಬೇಕು. ಆಗ ಮಾತ್ರ ಸಾಹಿತ್ಯಕೃತಿಗೆ ಪೂರ್ಣತ್ವ ಲಭ್ಯ. ಸಮನ್ವಯ ದೃಷ್ಟಿಯೆಂದರೆ, ವೈವಿಧ್ಯವೆಲ್ಲವನ್ನೂ ಸಂಕುಚಿತಗೊಳಿಸಿ ಏಕರೂಪತೆಯ ಎರಕದಲ್ಲಿ ಹೊಯ್ಯುವುದಲ್ಲ. ಪ್ರತಿಯೊಂದು ಪ್ರತ್ಯೇಕತೆಯನ್ನೂ ವಿವಿಧತೆಯನ್ನೂ ಸಹಾನುಕಂಪೆಯಿಂದ ಗೌರವಿಸಿ, ಅದರಲ್ಲಿನ ಉತ್ತಮಾಂಶವನ್ನು ಸ್ವೀಕರಿಸಿ ವ್ಯಕ್ತಿತ್ವ ವಿಕಾಸವನ್ನೂ ಯಾವುದರಲ್ಲೂ ರುಚಿಯನ್ನು ಕಳೆದುಕೊಳ್ಳದ ಮಾನಸಿಕ ಆರೋಗ್ಯವನ್ನೂ ಸಾಧಿಸುವ ಒಂದು ಸ್ತುತ್ಯವಾದ ಪ್ರಯತ್ನ. ಈ ದೃಷ್ಟಿ ಪಕ್ಷಾತೀತವಾದದ್ದು. ಈ ಉದಾರ ದೀಕ್ಷೆಯನ್ನು ಒಪ್ಪಿಕೊಂಡ ಗೋಕಾಕರ ಕಲಾತ್ಮಕ ವ್ಯಕ್ತಿತ್ವ ಯಾತ್ರಾರೂಪಿಯಾದದ್ದು. ಬೇಂದ್ರೆಯವರ ಸಾಧನೆ ಒಂದೇ ನೆಲೆಯಲ್ಲಿ ನಿಂತು ತಪಸ್ಸಿನಿಂದ ಸಾಕ್ಷಾತ್ಕಾರ ಪಡೆಯುವ ಪರಿಯದಾದರೆ, ಇವರದು ಒಂದು ಸುದೀರ್ಘ ಯಾತ್ರೆ. ಈ ಯಾತ್ರೆಯಲ್ಲಿ ಸುಖದುಃಖಗಳು ನೆರಳು ಬೆಳಕಿನಂತೆ ಸೈಜ ಸಂಗಾತಿಗಳಾಗಿವೆ. ಈ ನಿರಂತರ ಪಯಣದಲ್ಲಿ ಅವರು ಅನೇಕ ನಿಲ್ದಾಣಗಳನ್ನು ಮುಟ್ಟಿದ್ದಾರೆ. ಆದರೆ ಹಂಗಾಮಿಯಾಗಿ ಎಲ್ಲೂ ತಂಗಿದ್ದಾರೆ. ಚಲನಶೀಲತೆ

ಅವರ ಚೇತನದ ಚರಮ ಗುರಿ. ೧೯೮೨ರಲ್ಲಿ ಪ್ರಕಟವಾದ 'ಭಾರತಸಿಂಧುರಶ್ಮಿ' ಮಹಾಕಾವ್ಯ, ಗೋಕಾಕರ ಏಳೆಂಟು ವರ್ಷಗಳ ತಪಃಫಲ. ಅದರ ಹಿಂದಿನ ಸಿದ್ಧತೆ ಬಹುಶಃ ಹಲವು ದಶಕಗಳದ್ದು. 'ತ್ರಿವಿಕ್ರಮರ ಆಕಾಶಗಂಗೆ'ಯಲ್ಲಿ ಅಂಕುರಗೊಂಡ ಲೇಖಕರ ಮಹಾಕಾವ್ಯಾಸಕ್ತಿ, 'ತ್ರಿಶಂಕುವಿನ ಪ್ರಜ್ಞಾಪ್ರಭಾತ'ದಲ್ಲಿ ವಿಶ್ವಾಮಿತ್ರನ ಅರ್ಥವತ್ತಾದ ವ್ಯಕ್ತಿಮೆಯ ಆಳ ಅಗಲಗಳನ್ನು ಗ್ರಹಿಸಿ, ಕೊನೆಯಲ್ಲಿ ಆಧುನಿಕ ಮನುಷ್ಯನ ಜಟಿಲ ಬದುಕಿನ ಸಮರ್ಥ ಸಂಕೇತವಾಗಿ 'ಭಾರತಸಿಂಧುರಶ್ಮಿ'ಯಲ್ಲಿ ಔನ್ನತ್ಯ, ಗರಿಮೆಗಳನ್ನು ದಕ್ಕಿಸಿಕೊಂಡಿತು. ವಿಶ್ವಾಮಿತ್ರನನ್ನು ಕೇಂದ್ರವಾಗಿಸಿಕೊಂಡು ಬೃಹತ್ಕಾವ್ಯ ರಚನೆ ಮಾಡುವ ಗೋಕಾಕರ ಹಂಬಲಕ್ಕೆ ಇಂಬು ದೊರೆತದ್ದು ಇಪ್ಪತ್ತು ವರ್ಷಗಳ ಹಿಂದೆ ಅವರು ಕೈಗೊಂಡ ವೈದಾಧ್ಯಯನ ಹಾಗೂ ಸಂಬಂಧಪಟ್ಟ ಕೃತಿಗಳ ಅಭ್ಯಾಸದಿಂದ. ಈ ಕಾವ್ಯದಲ್ಲಿ ಇನ್ನೂರಕ್ಕೂ ಮಿಕ್ಕು ಪಾತ್ರಗಳು ತಮ್ಮ ಔಚಿತ್ಯಪೂರ್ಣ ಅನನ್ಯತೆಯಿಂದ ಶೋಭಿಸಿವೆ. ಇದರಲ್ಲಿ ಕಾವ್ಯಾತ್ಮಕತೆಗಿಂತ ರೂಪಣಾತ್ಮಕ ಅಂಶಕ್ಕೆ ಹೆಚ್ಚು ಒತ್ತು ಸಿಕ್ಕಿದೆ. ಇದರ ವಸ್ತು ಭಾರತ ವರ್ಷದ ಆರ್ಷ ಇತಿಹಾಸವನ್ನು ಆಧರಿಸಿದೆ; ಕನ್ನಡಕ್ಕೆ ನವೀನವಾಗಿದೆ. ಕನ್ನಡದ ಹಿಂದಿನ ಮಹಾ ಕಾವ್ಯಗಳಿಗೆ ಒಂದು ಸಿದ್ಧವಸ್ತುವಿದ್ದು, ಕವಿ ತನ್ನ ದರ್ಶನಕ್ಕೆ ಅನುಸಾರನಾಗಿ ಆ ಹಳೆಯ ವಸ್ತುವನ್ನು ಸಾಂಕೇತಿಕವಾಗಿ ಬಳಸಿಕೊಂಡಿರುವುದನ್ನು ನೋಡುತ್ತೇವೆ. ಪಂಪ, ರನ್ನ, ಕುಮಾರವ್ಯಾಸಾದಿಗಳಿಂದ ಹಿಡಿದು ಕುವೆಂಪು ಅವರನ್ನು ಉದಾಹರಿಸಬಹುದು. ಆದರೆ ಗೋಕಾಕರ 'ಭಾರತ ಸಿಂಧುರಶ್ಮಿ' ಮಹಾಕೃತಿಗೆ ಪೂರ್ವಸಿದ್ಧವಾದ ವಿಷಯವಿಲ್ಲ. ಭಾರತದ ಪ್ರಪ್ರಾಚೀನ ಚರಿತ್ರೆಯ ಉಷಃಕಾಲದ ಕೆಲವು ಸಂಗತಿಗಳಿಂದ ಅವರು ಒಂದು ಮಹತ್ ಕಥಾನಕವನ್ನೇ ರಚಿಸಿದ್ದಾರೆ. ಕವಿಯ ಕಲ್ಪನೆ, ನಿರೂಪಣೆ, ಕಾಣ್ಕೆಗಳು ಈ ಕಾವ್ಯದ ಹಲವು ಬಿಡಿ ಎಳೆಗಳನ್ನು ಬೆಸೆದು ಏಕಸೂತ್ರದಲ್ಲಿ ಹುರಿಗೊಳಿಸಿವೆ.

'ಭಾರತ ಸಿಂಧುರಶ್ಮಿ'ಯ ರಚನೆಗೆ ಮೂಲ ಪ್ರೇರಣೆ, ಪ್ರಾಯಃ ಮಿಲ್ಟನ್. ಹೋಮರ್ ಹಾಗೂ ವರ್ಜಿಲರ ಕಾವ್ಯಕೃತಿಗಳಲ್ಲಿ ಯುದ್ಧ, ಸಾಹಸಗಳ ಚಿತ್ರಣ ವಿಪುಲವಾಗಿದೆ. ಹದಿಮೂರನೆಯ ಶತಮಾನದ ಕವಿ ಡಾಂಟೆ ತನ್ನ ಮೇರುಕೃತಿಯಾದ 'ಡಿವೈನ್ ಕಾಮೆಡಿ'ಯಲ್ಲಿ ಯುದ್ಧ ಸಾಹಸಗಳ ಬದಲಿಗೆ ಧಾರ್ಮಿಕ ಆಧ್ಯಾತ್ಮಿಕ ಧಾತುಗಳನ್ನು ಬಳಸಿದ. ಹೀಗಾಗಿ ಆಂತರಂಗಿಕ ಮಹಾಕಾವ್ಯ (Subjective Poetry)ಕ್ಕೆ ಅದೊಂದು ಉತ್ತಮ ಮಾದರಿಯೆನಿಸಿತು. ಹೋಮರ್, ಡಾಂಟೆಯವರ ವಿಧಾನಗಳನ್ನು ಸಮನ್ವಯಗೊಳಿಸಿ ಮಹಾಕಾವ್ಯ ರಚಿಸಿದವ ಹದಿನೇಳನೆಯ ಶತಮಾನದ ಆಂಗ್ಲಕವಿ ಮಿಲ್ಟನ್. ಆತ ಸುರಾಸುರರ ಯುದ್ಧಗಳ ಜೊತೆಗೆ, ಧರ್ಮ ಆಧ್ಯಾತ್ಮಗಳನ್ನೂ ಕೂಡಿಸಿದ. ಈ ಸಮನ್ವಯ ಗೋಕಾಕರಿಗೆ ಅತಿ ಮೆಚ್ಚಾಯಿತು. ಭಾರತದ ಸಂದರ್ಭದಲ್ಲಿ ವೇದಕಾಲೀನ ವಸ್ತು ಈ ಆಶಯ ಪೂರೈಕೆಗೆ ಸರ್ವ ಸಮರ್ಥವೆನ್ನಿಸಿತು.

'ಭಾರತ ಸಿಂಧುರಶ್ಮಿ' ಎಂದು ಈ ಮಹಾಕಾವ್ಯಕ್ಕೆ ಹೆಸರಿಡಲು ಕಾರಣವಿದೆ. ಈ ತಲೆಬರೆಹದ ಮೂಲಕ ಅವರು ಒಂದು ಅಂತರಾರ್ಥವನ್ನು ಧ್ವನಿಸಿದ್ದಾರೆ. ಸುದಾಸನ ಕುಲದ ಭರತ ಒಬ್ಬ ಚಕ್ರವರ್ತಿ. ಅವನು ಸಂಘಟಿಸಿದ ರಾಜ್ಯ ಭಾರತ ವರ್ಷ. ಹೀಗಾಗಿ 'ಭಾರತ' ಪದಕ್ಕೆ ಒಂದು ವಿಶಿಷ್ಟವಾದ ಪ್ರಾಚೀನಾರ್ಥವಿದೆ. 'ಸಿಂಧು' ಎನ್ನುವುದು ಅಸ್ತಿತ್ವದ

ಒಂದು ಸೆಳಕು (stream of existance). 'ರಶ್ಮಿ' ಎನ್ನುವುದು ಪ್ರಜ್ಞೆಯ ಒಂದು ಕಿರಣ. ಈ ರಶ್ಮಿ ಸಿಂಧುವಿನಲ್ಲಿ ಲೀನವಾಗಬೇಕು. ಇಲ್ಲದಿದ್ದಲ್ಲಿ ಮನುಷ್ಯನ ತತ್ತ್ವ, ವೇದಾಂತಗಳು ಹಾಗೂ ಕಾರ್ಯ ವ್ಯವಹಾರಗಳು ವಿಘಟಿತಗೊಂಡು ಪ್ರತ್ಯೇಕ ನಿಲ್ಲುತ್ತವೆ. ಅಂದರೆ 'ಪ್ರಜ್ಞೆ' ಅಸ್ತಿತ್ವದಲ್ಲಿ ಸಮಾವಿಷ್ಟವಾದಾಗ ಮನುಷ್ಯಜೀವನ ಪರಿಪೂರ್ಣಗೊಳ್ಳುತ್ತದೆ. ನಮ್ಮ ಕಾಲದ ಹಾಗೂ ಪರಿಸರದ ಹಿನ್ನೆಲೆಯಲ್ಲಿ ವಿವೇಚಿಸಿದರೆ ಮಹಾಕಾವ್ಯ ಸೃಷ್ಟಿ ಅಸಂಗತವೆನ್ನಿಸುತ್ತದೆ ಎಂಬ ಅಭಿಪ್ರಾಯವೊಂದು ಕಾವ್ಯ ವಿಮರ್ಶಕರಲ್ಲಿ ಜನಜನಿತವಾಗಿದೆ. ಗೋಕಾಕರಿಗೂ ಮೊದಮೊದಲು ಹಾಗೆಯೇ ಅನ್ನಿಸಿತ್ತು. ಇಂಗ್ಲಿಷ್ ವಿಮರ್ಶೆಯಿಂದ ಪ್ರಭಾವಿತರಾಗಿ ಮಹಾಕಾವ್ಯದ ರಚನೆ ಇಂದಿನ ಯುಗಧರ್ಮಕ್ಕೆ ತಕ್ಕುದಲ್ಲ ಮತ್ತು ದುಸ್ಸಾಧ್ಯ ಸಹ ಎಂದು ಅವರು ನಂಬಿದ್ದರು. ಮಹಾಕಾವ್ಯದ ಆಶಯಪೂರ್ತಿಗಾಗಿ ಗದ್ಯದ ಮೊರೆ ಹೋಗಬೇಕೆಂದು ತಿಳಿಸಿದ್ದರು. ಈ ಕಾರಣಕ್ಕಾಗಿಯೇ ಅವರು 'ಸಮರಸವೇ ಜೀವನ' ವೆಂಬ ಮಹಾ ಕಾದಂಬರಿಯನ್ನು ಬರೆದದ್ದು. ಶ್ರೀ ಅರವಿಂದರ 'ಸಾವಿತ್ರಿ' ಎಂಬ ಮಹಾಕಾವ್ಯ ಅಂಶತಃ ಪ್ರಚುರವಾದಾಗ ಗೋಕಾಕರ ಕಣ್ಣು ತೆರೆಯಿತು. ಇಂಗ್ಲಿಷ್ ವಿಮರ್ಶೆಯನ್ನು ಕಪಾಟಿನಲ್ಲಿಟ್ಟು, ತಮ್ಮಷ್ಟಕ್ಕೆ ಆಲೋಚಿಸತೊಡಗಿದರು. ಮಹಾಕಾವ್ಯಕ್ಕೆ ಈಗಲೂ ಅನಂತ ಸಾಧ್ಯತೆಗಳಿವೆ, ಬೆಲೆಯಿದೆ ಎಂಬ ಸತ್ಯ ಆಗ ಮನಃಸ್ಪಷ್ಟವಾಯಿತು. ಆಧುನಿಕ ಗ್ರೀಕ್ ಸಾಹಿತ್ಯದಲ್ಲಿ ಕಜಾಂತ್ ಜಾಕಿಸ್ ಎಂಬುವರು ಬರೆದ 'The Odessey- a modern sequel' ಮಹಾಕಾವ್ಯದ ಮಾದರಿಯೂ ಇರುವ ಸಂಗತಿ, ಗೋಕಾಕರ ಮಹಾಕೃತಿ ರಚನಾಸಕ್ತಿಯನ್ನು ಸಮರ್ಥಿಸಿ ಬಲಗೊಳಿಸಿತು.

ಗೋಕಾಕರಿಗೆ, ಈ ಮಹಾಕಾವ್ಯ ರಚನೆಯ ಸಂದರ್ಭದಲ್ಲಿ ವೇದಕಾಲೀನ ವಿಶ್ವಾಮಿತ್ರನ ಸಂಕೀರ್ಣ ವ್ಯಕ್ತಿತ್ವ ಆಕರ್ಷಿಸಿತು. ವ್ಯಕ್ತಿಯೊಬ್ಬ, ತನ್ನ ಬದುಕಿನ ಪರಿಪೂರ್ಣತೆಯತ್ತ ಸಾಗಬೇಕಾದಲ್ಲಿ ಯಾವ ಯಾವ ಅಂಶಗಳು ಬೇಕಾಗುವುವೋ ಅವೆಲ್ಲ ವಿಶ್ವಾಮಿತ್ರನಲ್ಲಿ ಇರುವಂತೆ ಅವರಿಗೆ ತೋರಿತು. ಅವನು ರಾಜನಾಗಿ ಸಮರ್ಥ ಆಳಿತಗಾರನಾಗಿದ್ದ. ಪುರೋಹಿತನಾಗಿ ಸಾಮ್ರಾಜ್ಯ ನಿರ್ಮಾಣಕ್ಕೆ ಕಾರಣನಾಗಿದ್ದ. ಜೊತೆಗೇ ಋಷಿ ಮತ್ತು ದ್ರಷ್ಟಾರನೂ ಆಗಿದ್ದ. ಋಗ್ವೇದದ ಸೂಕ್ತಗಳಲ್ಲಿ ಇದಕ್ಕೆ ಸಾಕ್ಷ್ಯಗಳು ಸಿಗುತ್ತವೆ. ವಿಶ್ವಾಮಿತ್ರನ ಋಷಿತ್ವ ಸ್ವಭಾವಸಿದ್ಧವಾದದ್ದು. ದ್ರಷ್ಟಾರತನ ದೀರ್ಘ ತಪಸ್ಸಿನಿಂದ ಸಂಪಾದಿಸಿಕೊಂಡಿದ್ದು. ವಿಶ್ವಾಮಿತ್ರನ ಜಟಿಲತಮ ವ್ಯಕ್ತಿತ್ವದಲ್ಲಿ ಕಾಣ್ಕೆ (Vision) ಮತ್ತು ಮಾಳ್ಕೆ (Executive ability) ಸರಿಸಮಾನ ವಾಗಿದ್ದವು. ಇದೊಂದು ವಿರಳ ಗುಣ. ಹೀಗಿದ್ದಾಗ ಬದುಕು ಪೂರ್ಣತೆಯ ಹಾದಿಯನ್ನು ಹಿಡಿಯುತ್ತದೆ. ಆಮೇಲಿನ ಪುರಾಣಯುಗಕ್ಕೆ ಬಂದರೆ ಯೋಗೀಶ್ವರನಾದ ಕೃಷ್ಣನಲ್ಲಿ ಪರಿಪೂರ್ಣ ಕಾಣ್ಕೆಯಿತ್ತು. ಧನುರ್ಧಾರಿಯಾದ ಅರ್ಜುನನಲ್ಲಿ ಪರಿಪೂರ್ಣ ಮಾಳ್ಕೆಯ ಗುಣವಿತ್ತು. ಹೀಗೆ ಈ ಗುಣಗಳು ಬೇರೆ ಬೇರೆ ವ್ಯಕ್ತಿಗಳಲ್ಲಿ ಸೇರ್ಪಡೆಯಾಗಿದ್ದವು. ಇವರ ಕಾಲಕ್ಕೆ ಸುಮಾರು ಒಂದು ಸಾವಿರ ವರ್ಷಗಳ ಹಿಂದಾದರೂ ಈ ಎರಡೂ ಮಹದ್ಗುಣಗಳ ಸಾಮರಸ್ಯವನ್ನು ಒಬ್ಬನೇ ವ್ಯಕ್ತಿಯಲ್ಲಿ ದರ್ಶಿಸುತ್ತೇವೆ; ಅವನೇ ವಿಶ್ವಾಮಿತ್ರ. ಈ ಸಂಕೀರ್ಣ ತರವಾದ ವ್ಯಕ್ತಿತ್ವ ಕೇವಲ ಹಳೆಗಾಲದ ವಿಶಿಷ್ಟ ಬಳುವಳಿಯಲ್ಲ. ಪ್ರತಿ ಯುಗದಲ್ಲೂ ಇಂಥ

ವಿಶಿಷ್ಟ ಚೇತನದ ಕೆಲವೊಂದು ನಮೂನೆಗಳು ಇದ್ದೇ ಇರುತ್ತವೆ. ಎಷ್ಟು ಮುಖದಿಂದ ಜೀವನವನ್ನು ಅನುಭವಿಸಲು ಸಾಧ್ಯವೋ ಅಷ್ಟು ಹೆಚ್ಚು ಹೆಚ್ಚು ಸಂತೋಷ ಸಮಾಧಾನಗಳು ವ್ಯಕ್ತಿ ಬದುಕಿಗೆ ಕೂಡಿಕೊಳ್ಳುತ್ತವೆ. ಈ ಕಾರಣಕ್ಕಾಗಿ ಅವರು ವ್ಯಕ್ತಿತ್ವದ ಸಂಕೀರ್ಣತೆಯನ್ನು ಅಧಿಕಗೊಳಿಸಿಕೊಳ್ಳಲು ಹವಣಿಸುತ್ತಾರೆ. ಕವಿಯ ಬದುಕೂ ಇಂಥ ಪೂರ್ಣಸಂಕೀರ್ಣತೆಯ ಉಪಾಸನೆಯಿಂದ ಸಮೃದ್ಧಗೊಂಡಿದೆ. ಅನುಭವ ಸಂಕೀರ್ಣವಿದ್ದಷ್ಟೂ ಆನಂದ ಉತ್ಕಟವಾಗುತ್ತ ಹೋಗುವ ಪರಿಯನ್ನು ಅವರು ಮನಗಂಡಿದ್ದಾರೆ. ಪ್ರಜ್ಞೆ, ಆಳ ಎತ್ತರ ಚಿತ್ತರಗಳನ್ನು ಪಡೆಯುವಂತೆ ದಿನನಿತ್ಯ ಬದುಕನ್ನು ಸೂಕ್ಷ್ಮೀಕರಿಸುವುದು ಗೋಕಾಕರ ಗುರಿಯಾಗಿದ್ದ ಕಾಲವದು. ಪ್ರಜ್ಞೆ ದೇದೀಪ್ಯಮಾನವಾದಷ್ಟೂ ಆನಂದಕರಗೊಳ್ಳುತ್ತದೆ. ಮೃತ್ತಿಕೆ ತಾರಾಮೃತ್ತಿಕೆ ಯಾಗಿ, ತಾರಾಮೃತ್ತಿಕೆ ಜ್ಯೋತಿಯಾದಂತೆಲ್ಲ, ಆ ಶುದ್ಧ ಜ್ಯೋತಿ ಮಹದಾನಂದಕರವಾಗುತ್ತದೆ. ಇಂಥ ಸಂಕೀರ್ಣ ವ್ಯಕ್ತಿತ್ವದ ಸಂತತ ಸಾಧನೆ ಗೋಕಾಕರಿಗಿದ್ದದ್ದರಿಂದ, ವಿಶ್ವಾಮಿತ್ರಲ್ಲಿ ಆ ತೆರನಾದ ವ್ಯಕ್ತಿಮೆಯನ್ನು ಗುರುತಿಸಿ ಗ್ರಹಿಸಲು ಸಾಧ್ಯವಾಯಿತು. ಸಾಮಾಜಿಕ ಕಾರ್ಯಕಲಾಪಗಳ ಅನುಭವ ಹಾಗೂ ಆಂತರಿಕ ಪ್ರಜ್ಞೆಯ ಸಮನ್ವಯದಿಂದ ಈ ಪೂರ್ಣ ಸಂಕೀರ್ಣತೆ ಮೈತಾಳುತ್ತದೆ. ಇಂಥ ಅಪೂರ್ವ ಗುಣವಿರುವ ವಿಶ್ವಾಮಿತ್ರ 'ಭಾರತ ಸಿಂಧುರಶ್ಮಿ'ಯ ಪ್ರಧಾನ ಪಾತ್ರವಾಗಿರುವುದು ಸರ್ವಥಾಯೋಗ್ಯವಾಗಿದೆ. ಇವನ ಪ್ರೇರಣೆಯ ಜೊತೆಗೆ ಈ ಮಹಾಕಾವ್ಯ ರಚನೆಗೆ ಮತ್ತೊಂದು ಕಾರಣವೂ ಇದೆ. ಅದೆಂದರೆ ವಿಶ್ವಾಮಿತ್ರನ ಜೀವನ ಸನ್ನಿವೇಶಕ್ಕೆ ಸಂಬಂಧಿಸಿದ ತ್ರಿಶಂಕುವಿನ ಆಖ್ಯಾನ. ಈ ಆಖ್ಯಾನ 'ಭಾರತ ಸಿಂಧುರಶ್ಮಿ'ಯ ರಚನೆಗೆ ತತ್‌ಕ್ಷಣಿಕ ಸ್ಫೂರ್ತಿ ನೀಡಿದೆ. ಏಕೆಂದರೆ ತ್ರಿಶಂಕು ಆಧುನಿಕ ಮಾನವನ ದ್ವಂದ್ವ, ಕ್ರೈಸಿಸ್'ಗೆ ಸಂಕೇತವಾಗಬಲ್ಲ ಅವನ ಪರಕೀಯ ಪ್ರಜ್ಞೆ ಇಂದಿನ ಮನುಷ್ಯನ ಸಮಸ್ಯೆಯೂ ಆಗಿದೆ. ಅಂದರೆ ಸುಖನೆಮ್ಮದಿಗಳ ಅರಸುವಿಕೆಯಲ್ಲಿ ಇವೊತ್ತಿನ ಮನುಷ್ಯನಿಗೆ ತ್ರಿಶಂಕು ಸ್ಥಿತಿ ಪ್ರಾಪ್ತವಾಗಿದೆ. ಇದು ಯಾಂತ್ರಿಕ ನಾಗರಿಕತೆಯ ಫಲ. ಸುಖಶಾಂತಿಗಳ ತಡಕಾಟವನ್ನು ಅವನು ಹಲವು ನೆಲೆಗಳಲ್ಲಿ, ವಿಧಾನಗಳಲ್ಲಿ ನಡೆಸಿ ವಿಫಲಗೊಳ್ಳುತ್ತಾನೆ. ಸಂತತವಾದ ಹೆಣಗಾಟ ಅವನ ಬೆನ್ನುಬಿದ್ದಿರುತ್ತದೆ. ನೆನಪುಗಳಲ್ಲಿ, ಬುದ್ಧಿ ರಾಜ್ಯದಲ್ಲಿ, ಕಲ್ಪಕತೆಯಲ್ಲಿ, ಲೈಂಗಿಕ ಆಸಕ್ತಿಯಲ್ಲಿ ಅವನು ಸಂತೋಷ ನಿರಾಳಗಳನ್ನು ಅಗೆದು ತೆಗೆಯಲು ಪ್ರಯತ್ನಿಸುತ್ತಾನೆ. ಇದರಿಂದ ಅವನು ಗೊಂದಲಗೆಟ್ಟಾಗ, ಪರಿತಪಿಸುವಾಗ ತ್ರಿಶಂಕುವಿನ ಅಕಾಶಲೋಕ ಸಂಚಾರದಂತೆ ಅವನ ಪಾಡಾಗಬಹುದು. ಈ ವೈಫಲ್ಯದ ವೇದನೆ ಮನುಷ್ಯನನ್ನು ಸದಸದ್ವಿವೇಚನೆಗೆ ಹಚ್ಚಿವರೆ, ಅವನಲ್ಲಿ ತ್ರಿಕರಣ ಶುದ್ಧಿಯಾದೀತು; ಅಂತಃಸ್ಫುರಣದ ಸೆಲೆ ತೆರೆದುಕೊಂಡೀತು. ಈ ಅಂತಃಸ್ಫುರಣದ ಮುಖಾಂತರ ಅವನು ಇಡೀ ಬಹಿರ್ಜಗತ್ತಿನೊಡನೆ ಸಾಮರಸ್ಯ ಇಲ್ಲವೆ ತಾದಾತ್ಮ್ಯ ಹೊಂದಲು ಸಾಧ್ಯ. ಇವೊತ್ತಿನ ಮಾನವನಿಗೆ ಉಳಿದಿರುವ ಮಾರ್ಗೋಪಾಯ ಇದೊಂದೆ.

'ಭಾರತ ಸಿಂಧುರಶ್ಮಿ'ಯ ರಚನೆಗೆ ಮೂರನೆಯದಾದ ಮತ್ತೊಂದು ಪ್ರೇರಣೆಯನ್ನೂ ಗುರುತಿಸಬಹುದು. ಅದೆಂದರೆ ವಿಶ್ವಾಮಿತ್ರನ ಕಾಲಕ್ಕೂ ನಮ್ಮದಕ್ಕೂ ಇರುವ ಒಂದು ಮುಖ್ಯ ಸಾಮ್ಯ. ಈ ಭೂತ ವರ್ತಮಾನಗಳೆರಡೂ ಪುನರುಜ್ಜೀವನ (Renaissance)ದ

ಕಾಲಾವಧಿಗಳು. ಒಂದು ಸಂಸ್ಕೃತಿ ತಾತ್ಪೂರ್ತಿಕವಾಗಿ ನಿಶ್ಚೇತಗೊಂಡು ಸ್ಥಗಿತವಾದಾಗ ಅದರ ಪುನರುತ್ಥಾನಕ್ಕೆ ಪ್ರಚೋದಕರು ಬೇಕಾಗುತ್ತಾರೆ. ನಾಯಕರು, ತೀವ್ರಗಾಮಿಗಳು, ಪ್ರತಿಗಾಮಿಗಳು, ಪುರಸ್ಕರ್ತರು ಹೀಗೆ ಪ್ರಚೋದಕರ ಯಾದಿ ಬೆಳೆಯುತ್ತದೆ. ಇಂಥ ಒಂದು ವಿಶೇಷ ವ್ಯಕ್ತಿಸಮುದಾಯ ಕಾಣಸಿಗುವುದು ಪುನರುಜ್ಜೀವನ ಸಮಯದಲ್ಲಿ. 'ಭಾರತ ಸಿಂಧುರಶ್ಮಿ'ಯಲ್ಲಿ ಆಕಾಲದ, ಎಂದರೆ ಕ್ರಿ.ಪೂ. ೧೦೦೦ದ ಕಾಲದ, ವ್ಯಕ್ತಿ ಸಮುದಾಯದ ಸ್ವರೂಪ, ಕ್ರಿಯಾಶೀಲತೆ ಘಟನಾ ಪರಂಪರೆಗಳ ಚಿತ್ರಣವನ್ನು ಕಾಣಬಹುದು. ಇತಿಹಾಸದ ಎರಡು ಚಹರೆಗಳಾದ ಸಾರ್ವತ್ರಿಕತೆ ಮತ್ತು ಸಮಕಾಲೀನತೆಗಳನ್ನು ಈ ಕಾವ್ಯದಲ್ಲಿ ಬಿಂಬಿಸಲು ಗೋಕಾಕರು ಶ್ರಮಿಸಿದ್ದಾರೆ.

ಒಂದು ಜನಾಂಗದ, ಸಂಸ್ಕೃತಿಯ ಪುನರುಜ್ಜೀವನದ ಅಗತ್ಯ ಬೀಳುವುದು ಪ್ರಮುಖವಾಗಿ ಎರಡು ಕಾರಣಗಳಿಗಾಗಿ; ಆವರೆಗೂ ಇರದ ಒಂದು ಜಟಿಲ ಸಮಸ್ಯೆ ಅವುಗಳ ಎದುರಾದಾಗ; ಹೊಸ ವಾಸ್ತವದೊಡನೆ, ಸನ್ನಿವೇಶದೊಡನೆ, ಸಮನ್ವಯವಾಗಬೇಕಾದ ಸಂದಿಗ್ಧ ಮೂಡಿದಾಗ. ಆಗ ಆರ್ಯ ಜನಾಂಗಕ್ಕೆ ಉಂಟಾದ ಜಟಿಲ ಸಮಸ್ಯೆಯೆಂದರೆ ಅವರ ಹಾಗೂ ದಸ್ಯುಗಳ ನಡುವಣ ವಿರಸ, ಯುದ್ಧ. ಅದು ಸರಿಸುಮಾರು ಒಂದು ಸಾವಿರ ವರ್ಷಗಳವರೆಗಾದರೂ ನಡೆದಿರಬಹುದು; ಅಂದರೆ ಕ್ರಿ.ಪೂ. ೩೦೦೦ ರಿಂದ ಕ್ರಿ.ಪೂ. ೨೦೦೦ದ ತನಕ. ಇದರ ಪರಿಣಾಮವೆಂದರೆ ಆರ್ಯ ದಸ್ಯುಗಳ ನಡುವಣ ರಕ್ತ ಸಂಬಂಧದ ಸಾಮರಸ್ಯ ಮತ್ತು ತತ್ಫಲವಾದ ಸಾಂಸ್ಕೃತಿಕ ಪುನರುಜ್ಜೀವನ. ಈ ರಕ್ತಸಂಬಂಧ ಹೊಸದೊಂದು ಪೀಳಿಗೆಗೆ-ದಾಸ'-ಅನುವು ಮಾಡಿತು. ಆರ್ಯೇತಿಹಾಸವಾದ ಋಗ್ವೇದದಲ್ಲಿ ಕಾಣಿಸುವ ರಾಜರುಗಳಾದ ದಿವೋದಾಸ ಮತ್ತು ಅವನ ಮೊಮ್ಮಗ ಸುದಾಸ ಈ ಪೀಳಿಗೆಯ ಉದಾಹರಣೆಗಳು. 'ಭಾರತ ಸಿಂಧುರಶ್ಮಿ'ಯಲ್ಲಿ ಕಾಣುವ ಪುನರುಜ್ಜೀವನ ಈ ಆರ್ಯ-ದಸ್ಯುಗಳ ಸಂಘರ್ಷ ಮತ್ತು ಅನಂತರದ ಸಮನ್ವಯವನ್ನು ಕುರಿತದ್ದು ಮತ್ತು ಅದನ್ನು ಪುರಸ್ಕರಿಸುವಂಥದ್ದು. ಈ ಸಂಕರರೂಪದ ರಕ್ತ ಸಂಬಂಧದಿಂದ ಜೀವನ ರೀತಿ, ಧಾರ್ಮಿಕ, ಸಾಮಾಜಿಕ ಆಚಾರ ವಿಚಾರಗಳು ನವೀಕೃತವಾದವು; ಬದಲಾದವು. ಕೊಳುಕೊಡೆಯಿಂದ ಅಪೂರ್ವ ಸಮತೋಲ ಸ್ಥಾಪಿತವಾಯಿತು. ಆರ್ಯರದು ಅಶ್ವಸಂಸ್ಕೃತಿ, ದಸ್ಯುಗಳದು ವೃಷಭ ಸಂಸ್ಕೃತಿ. ಬಿಲ್ಲು ಬಾಣದ ಬಳಕೆಯನ್ನು ದಸ್ಯುಗಳು ಆರ್ಯರಿಂದ ಬಳುವಳಿಯಾಗಿ ಪಡೆದರು. ದಸ್ಯುಗಳ ರುದ್ರ ಆರ್ಯರ ದೇವತೆಗಳ ಸಾಲಿಗೆ ಸೇರಿದೆ. ಋಗ್ವೇದದ ಕಾಲಕ್ಕೆ ನಲವತ್ತೊಂಬತ್ತು ಮರುತರ ತಂದೆಯಾಗಿ ಮಾರ್ಪಟ್ಟ. ದಸ್ಯುದೇವತೆ ಉಮಾ, ಉಪನಿಷತ್ಕಾಲಕ್ಕೆ ಆರ್ಯಮಾನ್ಯೆಯಾಗಿ ರಾರಾಜಿಸಿದಳು. ದಸ್ಯುಗಳ ಸಂಸ್ಕೃತಿಯೂ ಆರ್ಯರಷ್ಟೇ ಕ್ರಿಯಾಶೀಲವೂ ಉನ್ನತವೂ ಆಗಿತ್ತು ಎನ್ನುವುದನ್ನು ಹರಪ್ಪ, ಮೊಹೇಂಜದಾರೊ ಮತ್ತಿತರ ಪ್ರದೇಶಗಳ ಉತ್ಖನನ ನಿಸ್ಸಂದೇಹವಾಗಿ ಸಾರಿದೆ. ಇನ್ನೊಂದು ಸಂಗತಿಯನ್ನು ಇಲ್ಲಿ ಪ್ರಸ್ತಾಪಿಸಬಹುದು; ಅದು ಭಾರತ ಸಿಂಧುರಶ್ಮಿಯ ವಸ್ತುವಿಗೆ ಸಂಬಂಧಿಸಿದ್ದು. ವಿಶ್ವಾಮಿತ್ರನ ಕಾಲಕ್ಕೂ ಇಂದಿನದಕ್ಕೂ ಇರುವ ಸಾಮ್ಯದಂತೆಯೇ ವ್ಯತ್ಯಾಸವಿರುವುದನ್ನು ಸೂಚಿಸುವಂಥದ್ದು. ವಿಶ್ವಾಮಿತ್ರನ ಕಾಲಕ್ಕೆ ವೈದಿಕ ಧರ್ಮ ಅರೆ ನಿದ್ರಾವಸ್ಥೆಯಲ್ಲಿತ್ತು. ಆಗ ಎದುರಾದ ಆರ್ಯ-ದಸ್ಯುಗಳ ಜಟಿಲ ಸಮಸ್ಯೆ, ಯಾವುದನ್ನು

ನಾವು ಭಾರತೀಯತೆಯೆಂದು ನಿರ್ದೇಶಿಸುತ್ತೇವೋ ಅಂಥ ಮಿಶ್ರ ಸಂಸ್ಕೃತಿಗೆ ಎಡೆಮಾಡಿ ಕೊಟ್ಟಿತು. ಆಗ, ಆ ಸಮಸ್ಯೆಯನ್ನು ಬಗೆಹರಿಸುವುದು ಇಂದಿನ ಭಾರತೀಯ ಪುನರುಜ್ಜೀವನ ದಷ್ಟು ಸುಲಭವಿರಲಿಲ್ಲ. ಇಂದಿನದು ಒಂದು ಪುನರ್ಜನ್ಮ ತಳೆದ ರೀತಿ. ಮಿಕ್ಕ ಹಲವು ಬಗೆಗಳಲ್ಲಿ ಮರಣಾಸನ್ನವಾಗಿ ಭಾರತೀಯ ಆತ್ಮವೊಂದು ಅಜೇಯವಾಗಿ ಉಳಿದದ್ದರಿಂದ; ಆತ್ಮಜ್ಞಾನ, ಆತ್ಮ ವಿಶ್ವಾಸದ ಸ್ತರಕ್ಕೆ ಈ ಸಂಸ್ಕೃತಿ ಬೆಳೆದದ್ದರಿಂದ, ಆಧುನಿಕ ಪುನರುಜ್ಜೀವನ ಸಾಧ್ಯವಾಗಿದೆ.

ಇವೊತ್ತು 'ಕಮಿಟ್‌ಮೆಂಟ್' ಎಂಬ ಮಾತು ಬಹು ಚಲಾವಣೆಯಲ್ಲಿದೆ. ಲೇಖಕನಿಗೆ ಕಮಿಟ್‌ಮೆಂಟ್ ಇರಬೇಕೆ ಎಂಬುದರ ಬಗ್ಗೆ ಗೋಕಾಕರು ಏನೆನುತ್ತಾರೆ? "ಇವೊತ್ತಿನ ಲೇಖನಿಗೆ ಅದರ ಅಗತ್ಯವಿದ್ದೇ ಇದೆ. ಒಂದಲ್ಲ ಒಂದು ಕಾಳಜಿ, ಬದ್ಧತೆಗೆ ಅವನ ಬರವಣಿಗೆ ಒಳಗಾಗಿರುತ್ತದೆ. ನಾನು ಹಲವು ಸಲ ಹೇಳಿದಂತೆ ಪೂರ್ಣ ಸಂಕೀರ್ಣತೆಯ ಉಪಾಸಕ. ಈ ಉಪಾಸನೆ ನನ್ನ ಕಮಿಟ್‌ಮೆಂಟ್, ಅಂದರೆ ಅದೊಂದು ಸಾಮಾಜಿಕ ಆಂತರಿಕ ಪ್ರಜ್ಞೆಗಳ ಸಮನ್ವಯ. ಅದನ್ನು ನನ್ನ 'ಯುಗಾಂತರ' ನಾಟಕದಲ್ಲಿ, 'ಸಮರಸವೇ ಜೀವನ' ಕಾದಂಬರಿಯಲ್ಲಿ 'ದ್ಯಾವಾ ಪೃಥಿವಿ' ಮತ್ತು 'ಭಾರತ ಸಿಂಧುರಶ್ಮಿ'ಯಲ್ಲಿ ಕಾಣಬಹುದು. ಈ ಸಮನ್ವಯ ಸಂಕೀರ್ಣ ಸ್ವರೂಪದ್ದು. ಇದು ಪರಂಪರೆಯ ಸಾರ್ವಕಾಲೀನ ತಿರುಳು. ಕ್ರಾಂತಿಯ ನವೋನವತೆ ಮತ್ತ ವಿಧಾಯಕ ಕಾರ್ಯಕ್ಷಮತೆಗಳನ್ನು ಒಳಗೊಂಡಿರುತ್ತದೆ. ಈ ಸಂಕೀರ್ಣತೆ ಲೇಖಕನ ಜೀವನದಲ್ಲಿ ಬೇರ್ವೊಂಡು, ಅವನ ಕೃತಿಯಲ್ಲಿ ಫಲಪುಷ್ಪ ರೂಪಿಯಾಗಿ ಪ್ರದರ್ಶಿತವಾಗ ಬೇಕಾಗುತ್ತದೆ." ಕ್ರಾಂತಿಯ ನವೋನವತೆ ಎಂದಾಗ ಅವರು ತಮ್ಮ ಜೀವನದ ನಿದರ್ಶನವನ್ನು ನಿರೂಪಿಸುತ್ತಾರೆ. ಅದು ಒಂದು ಬಗೆಯ ಸಾಮಾಜಿಕ ಸುಧಾರಣೆ, ಮೇಲ್ಪಾಡು. ೧೯೫೫ರಲ್ಲಿ ಅವರ ಮಗನ ಉಪನಯನದ ಸಂದರ್ಭ. ಆ ದಿನ ಸಂಜೆ ಅವರ ಗೃಹದಲ್ಲಿ ಕ್ರೈಸ್ತರೊಬ್ಬರಿಂದ ಬೈಬಲ್ ಮುಸ್ಲಿಮರೊಬ್ಬರಿಂದ ಕುರ್‌ಅನ್, ಜೈನರಿಂದ ಜೈನಪುರಾಣ, ಬೌದ್ಧರೊಬ್ಬರಿಂದ ಬುದ್ಧ ವಚನಗಳ ಪಠಣವಿರಿಸಿದ್ದರು. ಇದನ್ನು ತಿಳಿದ ವೈದಿಕ ಪುರೋಹಿತರು ಆ ಕಾರ್ಯಕ್ರಮ ದಲ್ಲಿ ಪಾಲ್ಗೊಳ್ಳಲು ಸಮ್ಮತಿಸಲಿಲ್ಲ. ಧಾರವಾಢ ಹುಬ್ಬಳ್ಳಿಯಲ್ಲಿ ಎಷ್ಟೋ ಮಂದಿಯನ್ನು ಕೇಳಿಯಾಯಿತು. ಕೊನೆಗೆ ಗದುಗಿನಲ್ಲಿದ್ದ ಮಹರ್ಷಿ ದೈವರಾತರಿಗೆ ತಂತಿ ಕಳಿಸಿದಾಗ, ಅವರು ಕೃಪೆಯಿಟ್ಟು ಬಂದು ಕಾರ್ಯಕ್ರಮವನ್ನು ವಿಧ್ಯುಕ್ತವಾಗಿ ನಡೆಸಿಕೊಟ್ಟರು.

ಇನ್ನು ಸಾಹಿತ್ಯ ವಿಮರ್ಶೆಯನ್ನು ಕುರಿತು ಅವರು ಪಡುವ ಅಭಿಪ್ರಾಯ ಇದು: ಇಂದಿನ ವಿಮರ್ಶೆಯಲ್ಲಿ ಅಹಂಮನ್ಯತೆಯ ದಂಡವಿದೆಯೇ ಹೊರತು ಮಾನದಂಡವಿಲ್ಲ. ಯಾವುದೇ ಕೃತಿಯ ನಿರ್ವಿಕಾರವಾದ ವಿವೇಚನೆ, ತುಲನೆ ನಡೆದಿದೆ ಎನ್ನಿಸದು. ಅದರಲ್ಲಿ ಗುಂಪುಗಾರಿಕೆಯ, ಬಲಾಬಲಗಳ ಸುಳಿವು ಇದ್ದೇ ಇರುತ್ತದೆ. ಅಲ್ಲದೆ. ವಿಮರ್ಶಕರಿಗೆ ವಿಮರ್ಶೆಮಾಡುವ ಪೂರ್ವಸಿದ್ಧತೆಗಳಾದ ಅಧ್ಯಯನ, ವಿಚಾರ ಶೀಲತೆ, ಸ್ವನಿರ್ಧಾರ ಬುದ್ಧಿಗಳು ಸಿದ್ಧಿಸಿರುವ ನಿದರ್ಶನಗಳು ವಿರಳ. ಅವರಿಗೆ ಮೌಲ್ಯಗಳೇ ನಿಶ್ಚಿತವಿರುವುದಿಲ್ಲ. ಸಾಹಿತ್ಯಾಂಶಗಳ ಪರಸ್ಪರ ಪ್ರಾಶಸ್ತ್ಯಗಳ ಬಗ್ಗೆ ಸ್ಪಷ್ಟ ಕಲ್ಪನೆಯಿರುವುದಿಲ್ಲ. ತನ್ನದೆನ್ನುವ ಅಥವಾ ತಾನು ಎರವಲು ಪಡೆದ ತತ್ತ್ವವನ್ನು ಸಮಸ್ತರ ಮೇಲೂ ಹೇರಲು ಹೋಗುತ್ತಾರೆ. ತಮ್ಮ ರುಚಿಯೇ ಸಾಹಿತ್ಯದ

ನೈಜ ಹಾಗೂ ಯುಕ್ತರುಚಿಯೆಂಬ ಭ್ರಮೆ ತಳೆದಿರುತ್ತಾರೆ. ರುಚಿಗಳಲ್ಲಿನ ತರತಮಾಂತರದ, ವೈವಿಧ್ಯದ ಅರಿವಿಲ್ಲ. ಇದಕ್ಕೆ ಅಪವಾದಗಳು ಅಪರೂಪ.

ಕಾವ್ಯಪ್ರಯೋಜನವನ್ನು ಕುರಿತಂತೆ ಭಾರತೀಯ ಮೀಮಾಂಸಕಾರರಲ್ಲಾಗಲಿ ಪಾಶ್ಚಾತ್ಯ ವಿಮರ್ಶಕವರೇಣ್ಯರಲ್ಲಾಗಲಿ ಏಕಕಂಠತೆ ಇಲ್ಲ. ಬಹುಶಃ ಮುಂದೆಯೂ ಏಕಾಭಿಪ್ರಾಯವೋ, ಸದೃಶಾಭಿಪ್ರಾಯವೋ ಸಾಧ್ಯವಾಗಲಾರದು. ಕಾವ್ಯದ ಹಿರಿಮೆಯಿರುವುದೂ ಈ ಅನಿಶ್ಚಿತತೆ ಅಪರಿಹಾರ್ಯತೆಗಳಲ್ಲೇ. ಗೋಕಾಕರು ತಮ್ಮದೇ ಆದ ಒಂದು ಸ್ವಾರಸ್ಯಕರ ಅಭಿಪ್ರಾಯವನ್ನು ಸೋದಾಹರಣವಾಗಿ ವಿಶದೀಕರಿಸುತ್ತಾರೆ: ಕಾವ್ಯದ ಪ್ರಮುಖ ಪ್ರಯೋಜನವೆಂದರೆ, ಜೀವನವನ್ನು ಹೊಚ್ಚಹೊಸದಾಗಿ ಕಾಣುವಂತೆ ಮಾಡುವುದು. ಕಾವ್ಯದ ವಿವಿಧ ಅಂಗಾಂಗಗಳ ದ್ವಾರಾ ವಸ್ತು ಹಾಯ್ದು ಹೋಗುತ್ತದೆ. ಅದರ ಈ ಎಲ್ಲ ಭಣಿತ ಮಣಿತಗಳಲ್ಲಿ ಓದುಗ ಆ ವಸ್ತುವನ್ನು ಹಿಂಬಾಲಿಸಿ, ಬದುಕನ್ನು ಪುನಶ್ಚೇತನಗೊಳಿಸಿಕೊಳ್ಳುವ ಗುರಿಯನ್ನು ತಲುಪುತ್ತಾನೆ. ಇದನ್ನು ಒಂದು ನಿದರ್ಶನದೊಂದಿಗೆ ವಿವರಿಸಬಹುದು. ದರ್ಶನ, ರಸ, ಭಾವ, ತತ್ತ್ವ ಅರ್ಥ, ಅಲಂಕಾರ, ಭಾಷೆ, ತಾಳ, ಲಯ – ಇವೇ ಮುಂತಾದ ವಿವಿಧ ಕಾವ್ಯಾಂಗಗಳಲ್ಲಿ ವಸ್ತುವನ್ನು ಎರಕ ಹೊಯ್ಯಲಾಗಿರುತ್ತದೆ. ಈ ಕಾವ್ಯಾಂಗಗಳ ವಿಧಾನ ಕೆಲವು ಹಳೆಯ ಗುಹೆಗಳಲ್ಲಿ ನಮಗೆ ನೋಡಲು ಸಿಗುವ ಕಮಾನಿನ ರಚನೆಯ ಹಾಗಿರುತ್ತವೆ. ಒಂದೊಂದು ಕಮಾನಿನ ಕೆಳಗೆ ಹಾದುಹೋಗುವಾಗ ಒಂದೊಂದು ವಿಧದ ಕಾವ್ಯಾಂಗಗಳಲ್ಲಿ ವಸ್ತುವನ್ನು ಎರಕ ಹೊಯ್ಯಲಾಗಿರುತ್ತದೆ. ಈ ಕಾವ್ಯಾಂಗಗಳ ವಿಧಾನ ಕೆಲವು ಹಳೆಯ ಗುಹೆಗಳಲ್ಲಿ ನಮಗೆ ನೋಡಲು ಸಿಗುವ ಕಮಾನಿನ ರಚನೆಯ ಹಾಗಿರುತ್ತವೆ. ಒಂದೊಂದು ಕಮಾನಿನ ಕೆಳಗೆ ಹಾದುಹೋಗುವಾಗ ಒಂದೊಂದು ವಿಧದ ಸಂಸ್ಕಾರವನ್ನು ಕವಿಯ ನಿರೂಪಣೆ ಜೀವಕ್ಕೆ ಒದಗಿಸುತ್ತದೆ. ಈ ಕಮಾನುಗಳು ಮುಂದುವರೆದಂತೆ ಒಂದಕ್ಕಿಂತ ಒಂದು ಕಿರಿದಾಗುತ್ತ ಹೋಗುತ್ತೆ. ಅಂದರೆ ಕಾವ್ಯದ ಸೂಕ್ಷ್ಮ ಶರೀರದ ಪ್ರವೇಶ ಒಂದು ಗುಹೆಯನ್ನು ಹೊಕ್ಕು ಮುಂದೆ ಸಾಗಿದ ಅನುಭವವನ್ನು ನೀಡುತ್ತದೆ. ಕಿರಿದಾಗುತ್ತ ಹೋಗುವ ಕಮಾನುಗಳ ಅಡಿಯಲ್ಲಿ ತುಸು ಬಗ್ಗಿಯೊ, ಅತಿಯಾಗಿ ಬಗ್ಗೆಯೊ, ಮಣಿದೊ, ಹೊಟ್ಟೆಯಿಂದ ತೆವಳಿಯೊ ಕೊನೆಯ ಕಮಾನಿನಿಂದ ಆ ಗುಹೆಯ ಮತ್ತೊಂದು ಕಡೆಯಿಂದ ಹೊರಬರುತ್ತೇವೆ ಅಂದುಕೊಳ್ಳೋಣ. ಆಗ, ಆ ಗುಹೆಯನ್ನು ಪ್ರವೇಶಿಸುವ ಮೊದಲಿಗೆ ಕಂಡ ಆಕಾಶನ್ನೇ ದರ್ಶಿಸುತ್ತೇವೆ. ಅಂದರೆ ಕಾವ್ಯವನ್ನು ಓದುವ ಮುಂಚೆ ನಾವು ಕಾಣುವ ಜೀವನಕ್ಕೂ, ಆಮೇಲೆ ವೀಕ್ಷಿಸುವುದಕ್ಕೂ ತಕ್ಕಮಟ್ಟಿನ ವ್ಯತ್ಯಾಸ ತೋರಿಬರುತ್ತದೆಯಷ್ಟೆ? ಇಂಥ ದೃಷ್ಟ್ಯಂತರ ನಮಗೆ ಕಾವ್ಯದ ಸತತಾಭ್ಯಾಸ ದಿಂದ ಲಭಿಸಬಲ್ಲದು. ಗುಹೆಯನ್ನು ಹೊಗುವ ಮುನ್ನ ನಾವುಕಂಡ ಆಕಾಶ ಮಾಮೂಲಿನದು, ನಿರ್ವಿಶಿಷ್ಟವಾದದ್ದು, ಅಂದರೆ Taken for granted ಅನ್ನುತ್ತೇವಲ್ಲ ಆ ರೀತಿಯದು. ಆ ಆಕಾಶ ನಮ್ಮ ಅವಜ್ಞೆಗೆ ಪಾತ್ರವಾಗಿತ್ತು. ಆದರೆ ಗವಿಯ ಕತ್ತಲೆಯೊಳಗಿಂದ ನಾವು ಬಗ್ಗಿ, ತೆವಳಿ ಹೊರಬಿದ್ದಾಗ ಝುಗ್ಗನೆ ಒಮ್ಮೆಲೆ ಬೆಳಕು ಢಾಳಾಗಿ ನಮ್ಮ ಕಣ್ಣುಗಳನ್ನು ಕೋರೈಸುತ್ತದೆ. ಹಿಂದಿಲ್ಲದಂಥ ಪ್ರಕಾಶಮಯವೂ, ನವೋನವವೂ ಆದ ಆಕಾಶ ನಮ್ಮೆದುರು ತೆರೆದುಕೊಳ್ಳುತ್ತದೆ. ಹೀಗೆ ಬದುಕಿನಲ್ಲಿ ಭವ್ಯತರವಾದದ್ದನ್ನು ನಾವು ದರ್ಶಿಸಲು ಸಮರ್ಥರಾಗುತ್ತೇವೆ. ಈ ಥರ ಬಾಳನ್ನು ನವೋನವವಾಗಿ ಕಾಣಿಸುವ ಉಪಕಾರ ನಮಗೆ ಉತ್ತಮ ಕಾವ್ಯದಿಂದ ಆಗುತ್ತದೆ.

ನಮ್ಮ ರಾಷ್ಟ್ರ ಜೀವನದಲ್ಲಿ ಇವೊತ್ತು ರಾಜಕೀಯಕ್ಕೆ ಸಿಕ್ಕುತ್ತಿರುವ ಮರ್ಯಾದೆ, ಮಹತ್ವ ಕಲೆ ಸಾಹಿತ್ಯ ವಿಜ್ಞಾನಾದಿಗಳಿಗೆ ಸಿಕ್ಕುತ್ತಿಲ್ಲವಷ್ಟೇ? ಇದೇನು ಯುಗ ಧರ್ಮದ ಫಲವೋ? ಗೋಕಾಕರು ಖಂಡತುಂಡವಾಗಿ ಉತ್ತರಿಸುತ್ತಾರೆ : ಅಲ್ಲ, ಇದು ಯುಗದ ಅಧರ್ಮದ ಫಲ. ಜನಪ್ರಿಯ ಮಾಧ್ಯಮಗಳು ರಾಜಕೀಯಕ್ಕೆ ಸಲ್ಲದ ಗೌರವ ನೀಡಿ ಮೆರೆಸುತ್ತಿದ್ದಾರೆ. ಒಂದು ಬಗೆಯಲ್ಲಿ ಜನಕ್ಕೆ ಏನು ಬೇಕೋ ಅದನ್ನಷ್ಟೇ ಪತ್ರಿಕೆಗಳವರು ನೀಡುತ್ತಾರೆ. ಅವರ ಉತ್ಥಾನತೆಗೆ, ಆಂತರಿಕ ವಿಕಾಸಕ್ಕೆ ಅಗತ್ಯವಿರುವುದನ್ನು ನೀಡುವ ಜವಾಬ್ದಾರಿ ಪ್ರಚಾರ ಮಾಧ್ಯಮಗಳ ಮೇಲಿದೆ. ಆ ಧ್ಯೇಯದಿಂದ ಅವು ಬಹುದೂರ ಉಳಿದಿವೆ.

*(ಕರ್ನಾಟಕ ಸಾಹಿತ್ಯ ಅಕೆಡೆಮಿಯಿಂದ ೧೯೯೧ರ ಸೃಜನೇತರ ವಿಭಾಗದ ಸರ್ವೋತ್ಕೃಷ್ಟ ಕೃತಿಯೆಂದು ಬಹುಮಾನ ಪಡೆದ "ಮನದೊಂದಿಗೆ ಮಾತುಕತೆ" ವೈಚಾರಿಕ ಕೃತಿಯಿಂದ ಆಯ್ಕೆ ಮಾಡಿದ ಲೇಖನ.)*

*(ಕೃಪೆ : **ನವ್ಯಸ್ಫೂರ್ತಿ ಗ್ರಂಥ,** ಪ್ರ : ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಪುಟ : ೬೧-೭೭)*



# ೧೧. ಗ್ರಂಥ ವಿಮರ್ಶೆ

■ ಡಾ. ಎಸ್.ವಿ. ಪ್ರಭಾವತಿ

## ೧. ಕುಂತಿಯ ಅಂತರಾಳ

**ಕುಂತಿಯ ಅಂತರಾಳ : ಲೇಖಕರು : ತಾರಾಮೂರ್ತಿ,ಪ್ರ : ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ, ನರಸಿಂಹರಾಜಾ ಕಾಲೋನಿ, ಬೆಂಗಳೂರು – ೫೬೦ ೦೧೯. ಪುಟ. ೯೬, ಬೆಲೆ ರೂ.೫೦/–, ೨೦೦೮.**

ಜಗತ್ತಿನ ಕವಿಗಳನ್ನೆಲ್ಲಾ ಸಾಲಾಗಿ ನಿಲ್ಲಿಸಿದರೆ ಒಬ್ಬರ ಕೈ ಇನ್ನೊಬ್ಬರ ಜೇಬಿನಲ್ಲಿ ಎಂಬ ಮಾತೊಂದಿದೆ. ಇದು ಎಷ್ಟು ಅನ್ವರ್ಥ ಎಂಬುದಕ್ಕೆ ನಮ್ಮ ದೇಶದ ಎರಡು ಮಹಾಕಾವ್ಯಗಳಾದ 'ರಾಮಾಯಣ', 'ಮಹಾಭಾರತ'ಗಳನ್ನನುಸರಿಸಿ, ಅನುವಾದಿಸಿ, ಬೆಳೆಸಿ, ಕಲ್ಪಿಸಿ, ಬದಲಾಯಿಸಿ, ಈ ದೇಶದ ಎಲ್ಲ ದೇಶ ಭಾಷೆಗಳಲ್ಲಿ ಮತ್ತು ಸಂಸ್ಕೃತದಲ್ಲೂ ರಚಿತವಾಗಿರುವ ಅಸಂಖ್ಯಾತ ಕೃತಿಗಳನ್ನು ಈ ಮಾತಿಗೆ ನಿದರ್ಶನವಾಗಿ ಕೊಡಬಹುದಾಗಿದೆ. ಸಂಸ್ಕೃತ ನಾಟಕಕಾರರೂ ಅತ್ಯಂತ ಪ್ರಾಚೀನರೂ ಆದ ಭಾಸ, ಭಟ್ಟನಾರಾಯಣರೇ ತಮ್ಮ ಕೃತಿಗಳಲ್ಲಿ ಈ ಕೆಲಸ ಮಾಡಿರುವಾಗ, ಈ ಪ್ರವೃತ್ತಿಯು ಅನೂಚಾನವಾಗಿ ಬೆಳೆದು ಬಂದಿದ್ದು, ಮಹಾಕಾವ್ಯವೊಂದನ್ನು ನಮ್ಮ ಜನ ಆರೋಗ್ಯಕರವಾಗಿ ಜೀರ್ಣಿಸಿಕೊಂಡಿರುವುದರ ಸಂಕೇತವಾಗಿದೆ. ಕನ್ನಡದ ಪ್ರಾಚೀನ ಕವಿಗಳಾದ ಪಂಪ, ರನ್ನ, ಕುಮಾರವ್ಯಾಸರೂ ತಮ್ಮ ಕೃತಿಗಳಲ್ಲಿ ಈ ಕೆಲಸವನ್ನು ಮಾಡಿದವರೇ, ಹೊಸಗನ್ನಡದಲ್ಲಿ ಹೀಗೆ ಮಹಾಭಾರತಕ್ಕೆ ಹೊಸದಾದ ವ್ಯಾಖ್ಯಾನವನ್ನು ಮನಃಶಾಸ್ತ್ರೀಯ ಮತ್ತು ಸಮಾಜಶಾಸ್ತ್ರೀಯ ಆಯಾಮದಿಂದ ಕೊಟ್ಟವರು ಎಸ್.ಎಲ್. ಭೈರಪ್ಪ, ತಮ್ಮ 'ಪರ್ವದ' ಮೂಲಕ. ಈ ರೀತಿಯ ಬರವಣಿಗೆಯನ್ನು

ಲೇಖಕರು ಅನುಸರಿಸಿದರೋ ಇಲ್ಲವೋ ತಿಳಿಯದು. ಆದರೆ ಲೇಖಕಿಯರ ಮೇಲೆ ಇದು ಅಗಾಧ ಪ್ರಭಾವ ಬೀರಿದ್ದಂತೂ

ಸತ್ಯ. 'ಪರ್ವ'ದಲ್ಲಿ ಕಂಡು ಬಂದ ಕುಂತಿ ದ್ರೌಪದಿಯರ ಅಂತರಂಗದ ಅನಾವರಣವೂ ಅನ್ಯಾದೃಶವಾಗಿದ್ದು ಲೇಖಕಿಯರು ತಮ್ಮೊಂದಿಗೆ ಅವರನ್ನು ಸಮೀಕರಿಸಿಕೊಳ್ಳಲು ಮತ್ತು ತಮ್ಮ ಒಳಗನ್ನು ಬಿಚ್ಚಿಡಲು ಅವಕಾಶ ಮಾಡಿಕೊಟ್ಟಿತು. ಸಾಮಾಜಿ ವಸ್ತುವನ್ನಿಟ್ಟುಕೊಂಡ ಈ ರೀತಿಯ ಅನಾವರಣ ಸಾಧ್ಯ ಎಂಬುದನ್ನು ತ್ರಿವೇಣಿ, ಅನುಪಮ ಮೊದಲುಗೊಂಡು ಇಂದಿಗೂ ಬರೆಯುತ್ತಿರುವ ನೇಮಿಚಂದ್ರ, ವೈದೇಹಿಯವರೆಗೂ ತೋರಿಸಲಾಗಿದೆ. ಆದರೆ ಪೌರಾಣಿಕ ಸ್ತ್ರೀಪಾತ್ರಗಳನ್ನು ಕೇವಲ ಪ್ರತಿಮೆಯಾಗಿಸಿ ಆ ಮೂಲಕ ಇದನ್ನು ಬಿಚ್ಚಿಡುವ ಒಂದು ರೋಚಕ ಕಾರ್ಯವು, ಜಿ. ವೆಂಕಟಸುಬ್ಬಯ್ಯನವರು ಮುನ್ನುಡಿಯಲ್ಲಿ ಗುರುತಿಸಿರುವಂತೆ ಈಗಾಗಲೇ ಪ್ರಾರಂಭವಾಗಿದೆ. ಆ ಪಟ್ಟಿಯಲ್ಲಿ ವೈಚಾರಿಕತೆ ಮತ್ತು ಹೊಸತನದಿಂದಾಗಿ ಈ ಪುಟ್ಟ ಪುಸ್ತಕದ ಲೇಖಕಿ ಗಮನ ಸೆಳೆಯುತ್ತಾರೆ.

ಸ್ವಗತದ ಧಾಟಿಯಲ್ಲಿರುವ ಐದು ಲೇಖನಗಳು ಸೇರಿ ಈ ಪುಸ್ತಕವಾಗಿದೆ. ಕುಂತಿಗೆ ಸಂಬಂಧಿಸಿ ಕರ್ಣನನ್ನೇ ಪ್ರಮುಖವಾಗಿಸಿ ಬರೆದವು ಎಂದು, ಆ ಲೇಖನಗಳನ್ನು ವಿಂಗಡಿಸಿರುವ ರೀತಿಯಿಂದ ಸೂಚಿತವಾಗುತ್ತಿದ್ದರೂ ಕುಂತಿಯ ಇಡೀ ಬದುಕೇ ಸ್ಮರಣ ತಂತ್ರದಲ್ಲಿ ಬಿಚ್ಚಿಕೊಳ್ಳುತ್ತದೆ. ಇದು 'ಪರ್ವ'ದಲ್ಲಿ ಭೈರಪ್ಪ ಅನುಸರಿಸಿರುವ ತಂತ್ರವೇ. ಆದರೆ ಇದು ಕೇವಲ 'ಪರ್ವ'ದ ಅನುಕರಣೆ ಯಾಗದೇ ಅವಳ ಆಲೋಚನೆಗಳು ಇನ್ನಷ್ಟು ಹೊಸ ಆಯಾಮ ಪಡೆದುಕೊಂಡಿರುವುದಕ್ಕೆ ಕೆಲವು ಅಂಶಗಳನ್ನು ಉದಾಹರಿಸಬಹುದು.

ಆರ್ಯಧರ್ಮವನ್ನು ವಿಸ್ತಾರವಾಗಿ ವಿವರಿಸುತ್ತಾ ವಿಡಂಬಿಸುವ ಲೇಖಕಿ ಧರ್ಮರಾಯನನ್ನು ಆರ್ಯಧರ್ಮದ ಪ್ರತಿಪಾದಕನಾಗಿ ಕಂಡಿರುವುದರಿಂದಲೇ ಅವಳಿಗೆ ಆ ಹಿರಿಮಗನ ಮೇಲೆ ದ್ವೇಷ, ತಿರಸ್ಕಾರ. ಇದಂತೂ ತೀರಾ ಹೊಸ ಪರಿಕಲ್ಪನೆ. ವ್ಯಾಸಭಾರತದಲ್ಲಿ ದ್ರೌಪದಿ ಹೀಗೆ ಮಾಡಿದ್ದುಂಟು, ಅದಕ್ಕೆ ಅವಳಿಗೆ ಕಾರಣವೂ ಇತ್ತು. ಕೃಷ್ಣ ಹೇಳುತ್ತಾನೆ "ನಾವೆಲ್ಲಾ ನೋಡಿಕೊಳ್ಳುತ್ತೇವೆ. ನೀನು ಗಾಬರಿಯಾಗಿ (ಯುದ್ಧದಿಂದ) ಹಿಂಜರಿಯದಿದ್ದರೆ ಸಾಕು. ನೀನು ಬೇಕಿದ್ದರೆ ಬಿಡಾರದಲ್ಲೇ ಇರು. ನೀನು ರಥವನ್ನೇರದಿದ್ದರೂ ಸರಿ. ನಾವು ಯುದ್ಧ ಮಾಡುತ್ತೇವೆ. ನಿನಗೆ ಮಹಾರಾಜನ ಪಟ್ಟ ಶತಸ್ಸಿದ್ಧ" ಎಂದು. ಇದಕ್ಕಿಂತ ವಾಚ್ಯವಾಗಿ ಧರ್ಮರಾಯನನ್ನು ಅಣಕಿಸಲು ಸಾಧ್ಯವೆ? ಈ ಹಿನ್ನೆಲೆಯಲ್ಲಿ ಪುಟ ೧೫೮ರ ಈ ವಾಕ್ಯ "ಕ್ಷತ್ರಾಣಿಯ ಮಗನಾಗಿ ಹುಟ್ಟಿದರೂ ರಕ್ತ ಕಂಡರೇ ಕಂಗಾಲಾಗಿ ಬಿಡುವ ಧರ್ಮರಾಯನನ್ನು ರಾಜ್ಯಕ್ಕಾಗಿ ಹೋರಾಡುವಂತೆ ಉತ್ತೇಜಿಸಿ ಹಿಂಜರಿಯದಂತೆ ನೋಡಿಕೊಳ್ಳುವುದೇನು ಸುಲಭದ ಕೆಲಸವೆ?" ಇದು ಕುಂತಿಯ ಮಾತು.

ಆರ್ಯಧರ್ಮ, ಕುರಿತ ವ್ಯಾಖ್ಯಾನ ಮತ್ತು ಲೋಕ ಸಂಗ್ರಹ ಪದದ ಅರ್ಥ ಬಹುಶಃ ಮಹಾಭಾರತದ ಅನುಶಾಸನ ಪರ್ವ, ಸೌಪ್ತಿಕ ಪರ್ವ ಮತ್ತು ಶಾಂತಿಪರ್ವಗಳದ್ದಿರಬೇಕು. ಪರ್ವದಲ್ಲಿ ಇದು ಇನ್ನಷ್ಟು ವಿಡಂಬನಾತ್ಮಕವಾಗಿ ಬಂದಿದೆ. ಆದರೆ ಸೊಗಸಾದ ವಿಷಯವೊಂದು ಬರವಣಿಗೆಯಲ್ಲಿ ಇರುವ ಸರಳತೆಯ ಕೊರತೆಯಿಂದ ಅಸ್ಪಷ್ಟವಾಗಿ ತನ್ನ ಗುರಿ ತಲುಪುತ್ತಿಲ್ಲ. – ಯಾವುದೇ ಸಮಸ್ಯೆಗೆ ಆರ್ಯರು ತಿಳಿದಿರುವ ಪರಿಹಾರ ಒಂದೇ "ಯುದ್ಧಮಾಡಿ" ಎಂಬ ಮಾತು ಸಮಕಾಲೀನ ನೆಲೆಯಲ್ಲೂ ಚರ್ಚೆಗೆ ಅರ್ಹವಾಗಿದೆ. ಧರ್ಮರಾಯನ

ಬಗ್ಗೆ ಕೆಲವು ಅನುಚಿತ ವಾಕ್ಯಗಳು – ಉದಾಹರಣೆಗೆ ದ್ರೌಪದಿಯ ಸೆರಗನ್ನೆಳೆಯುತ್ತಿರುವಾಗಲೂ ಕೈಕಟ್ಟಿ ನಿಂತಿದ್ದ ಧರ್ಮರಾಯ ಸಾಮ್ರಾಟ ಪದವಿಗೆ ಅರ್ಹನೆ? "ಹಾಳೂರಿಗೆ ಉಳಿದವನೇ ಗೌಡ" – ಇವು ವ್ಯಾಸ ಭಾರತವನ್ನು ಸರಿಯಾಗಿ ಅರ್ಥಮಾಡಿಕೊಳ್ಳದೇ ಇರುವುದರಿಂದ ಹುಟ್ಟಿದವು. ಧರ್ಮರಾಯನಿಗೆ ಬದಲಾಗಿ ಅರ್ಜುನನಿಗೆ ಭೀಮನಿಗೆ ಪಟ್ಟಕಟ್ಟಿದ ಪಂಪ ರನ್ನರಿದ್ದಾರೆ. ಆದರೆ ಧರ್ಮರಾಯನ ಬದಲು ಕೃಷ್ಣನಿಗೆ ಸಾಮ್ರಾಜ್ಯ ಪದವಿ ಎಂಬ ಮಾತು ಇಲ್ಲಿ ಮಿಂಚಿನಂತೆ ಸುಳಿದು ರೋಮಾಂಚನ ವೆಬ್ಬಿಸುತ್ತದೆ. ಇದಂತೂ ಎಂತಹ ಹೊಸ ಕಲ್ಪನೆ ಅಲ್ಲವೇ.

ಸುಜನಾ ಅವರ 'ಯುಗ ಸಂಧ್ಯಾ' ಮಹಾಕಾವ್ಯವನ್ನು ಬಿಟ್ಟರೆ, ಕನ್ನಡದಲ್ಲಿ ಗದಾಪರ್ವದ ನಂತರದ ಕತೆಯನ್ನು ಯಾರೂ ಹೇಳಿಲ್ಲವೆಂದೇ ತೋರುತ್ತದೆ. (ತಿಮ್ಮಣ್ಣಕವಿ ಬರೆದ ಕುಮಾರವ್ಯಾಸ ಭಾರತದ ಮುಂದಿನ ಭಾಗದ ಕತೆಯಲ್ಲಿ ವಿಶ್ಲೇಷಣೆ ಏನೂ ಇಲ್ಲ) ಆ ಕಾರಣದಿಂದ ಈ ಪುಸ್ತಕದ ಕೊನೆಯ ಲೇಖನಗಳು ಗಮನಾರ್ಹ ಎಂದು ಮೇಲು ನೋಟಕ್ಕೆ ತೋರಿದರೂ ಅವೂ ಸ್ಮರಣ ತಂತ್ರದಲ್ಲೇ ಇರುವುದರಿಂದ ಮತ್ತೊಮ್ಮೆ ಕುಂತಿಯ ಬದುಕಿನ ಒಂದು ಅಧ್ಯಾಯವೇ ಆಗಿ ಬಿಡುತ್ತದೆ.

ನಿರೂಪಣೆಯಲ್ಲಿ ಭಾವ ತೀವ್ರತೆ ಇದೆ. ಸ್ತ್ರೀ ಸಂವೇದನೆಯ ದೃಷ್ಟಿಯಿಂದ ಹೊಸತನವಿದೆ. ಆದರೆ ಬರವಣಿಗೆಯ ಶೈಲಿ ಮಾತ್ರ ಸಾಂಪ್ರದಾಯಕವಾಗಿದೆ. ಇಂತಹ ನಿರೂಪಣೆಗೆ ಸರಳವಾದ ಶೈಲಿ ಹೆಚ್ಚು ಸೂಕ್ತವೇನೋ ಹಾಗೆ ಇಂತಹ ರೋಚಕ ಅನಾವರಣಗಳಿಗೆ ಕಾದಂಬರಿಯ ಫಾರ್ಮುಲಾ ಹೆಚ್ಚು ಸೂಕ್ತವಾಗಬಹುದು. ಅಲ್ಲಿಯಾದರೆ ಕಾಲಕ್ರಮಣಿಕೆ ಇದ್ದು ಒಂದೂ ಅಂಶ ಬಿಟ್ಟು ಹೋಗದಂತೆ ನೇಯಬಹುದಾದ ಸಾಧ್ಯತೆಗಳು ಹೆಚ್ಚು.(ಹಾಗೆ 'ಪರ್ವ'ದಲ್ಲೂ ದ್ರೌಪದೀ ಸ್ವಯಂವರವೇ ಬಿಟ್ಟು ಹೋಗಿದೆ).

ಕೆಲವು ಅಂಶಗಳಿಗೆ ಇಲ್ಲಿ ಸಮರ್ಥನೆ ಇಲ್ಲ, ಕುಂತಿ ಧರ್ಮರಾಯನನ್ನು ಉದ್ದಕ್ಕೂ ಬೈಯುತ್ತಾಳೆ ಏಕೆ? ಕಾರಣ ನೀಡಿದ್ದರೂ ಸಮಂಜಸ ಅನ್ನಿಸುವುದಿಲ್ಲ. ಅದೇ ರೀತಿ ಇಂತಹ ಕೆಲವು ಹೊಸ ಪರಿಕಲ್ಪನೆಗಳು ಚೇತೋಹಾರಿಯೂ ಆಗಿವೆ.ಉದಾಹರಣೆಗೆ: ಕುಂತಿಯ ಬಳಿ ತಾನು ಪಡೆದ ಕರ್ಣನ ಜೀವಕ್ಕೆ ಪ್ರತಿಯಾಗಿ ಪರೀಕ್ಷಿತನ ಜೀವವನ್ನು ಉಳಿಸಿದೆ ಎಂಬರ್ಥದಲ್ಲಿ ಕೃಷ್ಣ ಹೇಳುವ ಜೀವಕ್ಕೆ ಜೀವ ಎಂಬ ಮಾತು.

■ ಡಾ. ಎಸ್.ವಿ. ಪ್ರಭಾವತಿ

## ೨. ಶ್ರೀ ವಾಸುದೇವ ಮಹಿಮಾ

**ಶ್ರೀ ವಾಸುದೇವ ಮಹಿಮಾ : ಸಂಪಾದಕರು : ಡಾ. ನಾ. ಗೀತಾಚಾರ್ಯ, ಪ್ರ : ಸದ್ಗುರು ಶ್ರೀವಾಸುದೇವಾರ್ಯ ಅಧ್ಯಯನ ಕೇಂದ್ರ, ೧೨/೧, ೨ನೇ ಮುಖ್ಯರಸ್ತೆ, ಶೇಷಾದ್ರಿಪುರ,ಬೆಂಗಳೂರು –೫೬೦ ೦೨೦, ಪುಟ. ೬೪, ಬೆಲೆ: ರೂ.೫೦/–, ೨೦೦೯.**

ಕನ್ನಡದಲ್ಲಿ ವಚನಸಾಹಿತ್ಯ ಬೆಳಕಿಗೆ ಬಂದಷ್ಟು, ಅವುಗಳನ್ನು ಕುರಿತ ವಿಚಾರ, ವಿಮರ್ಶಾ ಗ್ರಂಥ – ಲೇಖನಗಳು ಬಂದಷ್ಟು ದಾಸಸಾಹಿತ್ಯ ಪ್ರಕಟವಾಗಿಲ್ಲ. ಇತ್ತೀಚೆಗೆ ಸ್ವಲ್ಪ ಅಧಿಕ

ಪ್ರಮಾಣದಲ್ಲಿ ದಾಸ ಸಾಹಿತ್ಯ ಪ್ರಕಟವಾಗುತ್ತಿದೆ. ಆದರೂ ಬೆಳಕಿಗೆ ಬಾರದಿರುವ ಹರಿದಾಸರ ಕೃತಿಗಳು ಸಾಕಷ್ಟಿವೆ. ಈ ಪೈಕಿ ಹರಿದಾಸಿಣಿಯರ ಕೃತಿ ಪ್ರಕಟನೆಗಳು ಅತ್ಯಲ್ಪವೆಂದರೆ ತಪ್ಪಲ್ಲ. ಏಕೆಂದರೆ ಕೇವಲ ೨೦-೩೦ ಹರಿದಾಸಿಣಿಯರು ಕಂಡುಬರುತ್ತಾರೆ. ಅವರ ಪೈಕಿ ಅದ್ವೈತ ಹರಿದಾಸಿಣಿಯರು ಅಕ್ಷರಶಃ ಕೈಬೆರಳೆಣಿಕೆಯಷ್ಟೆ ಮಂದಿ. ಇದುವರೆಗೆ ಪ್ರಕಟವಾಗಿರುವ ಹರಿದಾಸ ಸಾಹಿತ್ಯದಲ್ಲಿ ಹೆಳವನಕಟ್ಟೆ ಗಿರಿಯಮ್ಮಳೊಬ್ಬಳೇ ಎದ್ದು ಕಾಣುತ್ತಾಳೆ. ೨೦ನೇ ಶತಮಾನದಲ್ಲಿ ಇತರ ಕ್ಷೇತ್ರಗಳಲ್ಲಿ ಸಾಕಷ್ಟು ಮಂದಿ ಮಹಿಳೆಯರು ಕಂಡು ಬಂದರೂ ದಾಸಸಾಹಿತ್ಯದಲ್ಲಂತೂ ಎಲ್ಲೋ ಅಲ್ಲೊಬ್ಬರು ಇಲ್ಲೊಬ್ಬರು ಕಂಡು ಬರುತ್ತಾರೆ. ಈ ಪೈಕಿ ಡಾ. ನಳಿನಿರಾವ್ ಒಬ್ಬರು.

ಬಬ್ಬೂರುಕಮ್ಮೆ ಪಂಗಡಕ್ಕೆ ಸೇರಿದ ದಿ॥ ಶ್ರೀನಿವಾಸರಾವ್ (೧೯೦೭-೧೯೮೩) ಮತ್ತು ದಿ॥ ಪದ್ಮಾವತಮ್ಮ (೧೯೧೯-೨೦೦೮) ಅವರ ಮೂವರು ಹೆಣ್ಣುಮಕ್ಕಳಲ್ಲಿ ಮೂರನೆಯವರಾದ ಡಾ॥ ನಳಿನಿರಾವ್ ಅವರು ದಿನಾಂಕ: ೦೭-೦೮-೧೯೪೫ರಲ್ಲಿ ಜನಿಸಿದರು. (ನಿಧನ ದಿನಾಂಕ: ೧೪-೦೪-೨೦೦೯) ಬೆಂಗಳೂರು ವಿಶ್ವವಿದ್ಯಾಲಯದಿಂದ ಎಂ.ಎ. ಡಿಗ್ರಿ ಗಳಿಸಿದ ಮೇಲೆ ಎಂ.ಇಡಿ ಶಿಕ್ಷಣ ಪಡೆದು ಶಿಕ್ಷಣ ವಿಭಾಗದಲ್ಲಿ ರೀಡರ್ ಆಗಿ ಕಾರ್ಯನಿರ್ವಹಿಸಿ ನಿವೃತ್ತರಾಗಿ ಅಧ್ಯಾತ್ಮಸಾಧನೆಯಲ್ಲಿ ತೊಡಗಿದ್ದರು. ವಾಸುದೇವಾರ್ಯರು ಇವರ ಕುಲಗುರುಗಳು, ಇವರ ಮೊಮ್ಮಗ ವೆಂಕಟದಾಸಾರ್ಯರು, ಇವರ ಮೊಮ್ಮಗ ದಾಸರರಾಮಣ್ಣನವರು, ಇವರ ಮೊಮ್ಮಗಳೇ ನಳಿನಿರಾವ್ ಅವರ ತಾಯಿ ಪದ್ಮಾವತಮ್ಮನವರು, ಪದ್ಮಾವತಮ್ಮನವರ ತಾತನವರ ತಾತ ವೆಂಕಟದಾಸರ ತಂಗಿ ಮಗ ತಿಮ್ಮಪ್ಪದಾಸರ ಮೊಮ್ಮಗ ಎಂ.ವಿ.ಸೀತಾರಾಮಯ್ಯನವರು. ತಿಮ್ಮಪ್ಪದಾಸರ ಕೀರ್ತನೆಗಳನ್ನು ಎಂ.ವಿ.ಸೀ ಅವರು ಪ್ರಕಟಿಸಿದ್ದಾರೆ.

ಆದರೆ ವಾಸುದೇವಾರ್ಯರ ಇತರ ಶಿಷ್ಯರ ಪ್ರಶಿಷ್ಯರ ಕೀರ್ತನೆಗಳು ಸಾಕಷ್ಟಿದ್ದು ಅವು ಅಪ್ರಕಟಿತವಾಗಿವೆ. ಅವುಗಳನ್ನು ಪ್ರತಿವರ್ಷ ಗುರುಗಳ ಆರಾಧನೆ ದಿನ ಕುಟುಂಬದವರು ಹಾಡುತ್ತಿದ್ದರು. ನಳಿನಿರಾವ್ ಅವರ ಪೂರ್ವಜರಾದ ವೆಂಕಟದಾಸಾರ್ಯರ ಮತ್ತು ಇತರರ ಕೀರ್ತನೆಗಳನ್ನು ಡಾ. ನಾ. ಗೀತಾಚಾರ್ಯರು ಪ್ರಕಟಿಸಿದ್ದಾರೆ. ಇನ್ನೂ ಅನೇಕ ಕೀರ್ತನೆಗಳು ಪ್ರಕಟವಾಗಬೇಕಾಗಿದೆ. ವಾಸುದೇವಾರ್ಯರ ಶಿಷ್ಯ ಪ್ರಶಿಷ್ಯ ಪರಂಪರೆಯಲ್ಲಿ ಕೀರ್ತನೆಕಾರರ ಪರಂಪರೆ ೨೧ನೇ ಶತಮಾನದಲ್ಲೂ ಮುಂದುವರೆದಿರುವುದಕ್ಕೆ ಡಾ. ನಳಿನಿರಾವ್ ಅವರು ರಚಿಸಿದ ಹಲವಾರು ಕೀರ್ತನೆಗಳು ಸಾಕ್ಷಿಯಾಗಿವೆ.

ದಾಸಸಾಹಿತ್ಯದಲ್ಲಿ ಪುರುಷ ಗುರುಪರಂಪರೆ ಮುಂದುವರೆದಂತೆ ಮಹಿಳಾ ಹರಿದಾಸರ ಪರಂಪರೆ ಮುಂದುವರೆದಿಲ್ಲ, ಅಲ್ಲೊಬ್ಬರು ಇಲ್ಲೊಬ್ಬರು ಕಾಣಿಸಿಕೊಂಡಿದ್ದಾರೆ. ಅದರಲ್ಲೂ ಅದ್ವೈತ ಹರಿದಾಸಿಣಿಯರಂತೂ ಕೇವಲ ಬೆರಳೆಣಿಕೆಯಷ್ಟು ಮಂದಿ. ಇವರ ಪೈಕಿ ಡಾ. ನಳಿನಿರಾವ್ ಅವರು ವಿಶಿಷ್ಟವ್ಯಕ್ತಿಯಾಗಿದ್ದಾರೆ.

ಡಾ. ನಳಿನಿರಾವ್ ಅವರಿಗೆ ತಮ್ಮ ಗುರುಪರಂಪರೆ ಬಗ್ಗೆ, ಅವರು ರಚಿಸಿದ ಸಾಹಿತ್ಯದ ಬಗ್ಗೆ ವಿಶೇಷ ಅಭಿಮಾನವಿದ್ದು ಆ ಬಗ್ಗೆ ಅಧ್ಯಯನ ನಡೆಸಿದ್ದರು. ಅವರ ಉಯಿಲಿನಲ್ಲಿ ಅವರ ಆಶೋತ್ತರಗಳು ಹಲವಾರು ವ್ಯಕ್ತವಾಗಿವೆ. ಕುಲಗುರು ವಾಸುದೇವಾರ್ಯರ ಕೀರ್ತನೆಗಳು

ಮತ್ತು ವೆಂಕಟದಾಸಾರ್ಯರ ಕೀರ್ತನೆಗಳನ್ನು ಪ್ರಕಟಿಸುವುದು. ಗುರುವಾಸುದೇವಾರ್ಯರ ಚಿಕ್ಕನಾಯಕನಹಳ್ಳಿಯಲ್ಲಿರುವ ಬೃಂದಾವನದ ಜೀರ್ಣೋದ್ಧಾರ ಮತ್ತು ಆರಾಧನೆ ವ್ಯವಸ್ಥೆ, ವಾಸುದೇವಾರ್ಯ ಪರಂಪರೆಯ ಎಲ್ಲ ಶಿಷ್ಯರ ಕೀರ್ತನೆಗಳನ್ನು ಜನರಲ್ಲಿ ಪ್ರಚಾರಗೊಳಿಸುವುದು ಇವೇ ಮೊದಲಾದ ಪ್ರಕಟನ-ಪ್ರಚಾರ ಕಾರ್ಯಗಳಿಗಾಗಿ ತಮ್ಮ ಆಸ್ತಿಯನ್ನೇ ಬಿಟ್ಟು ಹೋಗಿದ್ದಾರೆ.

ಡಾ. ನಳಿನಿರಾವ್ ಮೊದಲಿಂದಲೂ ಹರಿದಾಸ ಸಾಹಿತ್ಯದಲ್ಲಿ ವಿಶೇಷ ಅಧ್ಯಯನ ಮಾಡಿದವರಾಗಿದ್ದರು. ತಿಮ್ಮಪ್ಪದಾಸರ ಶ್ರೀಕೃಷ್ಣಬಾಲಲೀಲೆಗೆ ಮತ್ತು ಅರ್ಚನ ಗ್ರಂಥದ ಕೀರ್ತನೆಗಳಿಗೆ ಪ್ರತಿ ಕೀರ್ತನೆಗೂ ಟಿಪ್ಪಣಿಗಳನ್ನು ಬರೆದಿದ್ದಾರೆ. ಸ್ವತಃ ಸಂಗೀತಗಾರ್ತಿ ಆಗಿದ್ದು ತಮ್ಮ ಕೀರ್ತನೆಗಳಿಗೆ ರಾಗ-ತಾಳಗಳನ್ನು ನಿಯೋಜಿಸಿದ್ದಾರೆ.

ಗುರು ವಾಸುದೇವಾರ್ಯರ ಶಿಷ್ಯ ಪ್ರಶಿಷ್ಯ ಪರಂಪರೆಯಲ್ಲಿ ಸುಮಾರು ೮-೧೦ ಕೀರ್ತನಕಾರರು ಕೀರ್ತನೆಗಳನ್ನು ರಚಿಸಿದ್ದಾರೆ. ಆಪೈಕಿ ಡಾ. ನಳಿನಿರಾವ್ ಅವರು ಏಕೈಕ ಹರಿದಾಸಿಣಿ ಆಗಿದ್ದಾರೆ. ಸಂಸ್ಕೃತ, ಇಂಗ್ಲಿಷ್, ಕನ್ನಡ ಭಾಷೆಗಳನ್ನು ಸಂಗೀತ, ಅಧ್ಯಾತ್ಮವನ್ನು ಚೆನ್ನಾಗಿ ಬಲ್ಲ ನಳಿನಿರಾವ್ ಅವರು ಬಹು ಪ್ರತಿಭಾವಂತ ಹರಿದಾಸಿಣಿ ಆಗಿದ್ದರು. ಅವರು ಗುಪ್ತಭಕ್ತಿಯ ಗುಪ್ತಭಕ್ತರಾಗಿದ್ದಾರೆ. ಹೊರಗೆ ಇತರ ಲೌಕಿಕರಂತೆ ಜೀವನೋದ್ಧಾರ ಮಾಡುತ್ತಾ ಸಾಮಾನ್ಯರ ಹಾಗೆ ನಿತ್ಯ ಜೀವನದಲ್ಲಿ ವೇಷಭೂಷಣ, ಮಾತುಕತೆಗಳಲ್ಲಿ -ವ್ಯವಹಾರದಲ್ಲಿ ತೊಡಗಿರುತ್ತಾರೆ. ಹೀಗಾಗಿ ಅವರನ್ನು ಹರಿದಾಸರು ಎಂದು ಗುರುತಿಸುವುದೇ ಕಷ್ಟವಾಗಿರುತ್ತದೆ, ಅದರಲ್ಲೂ ಗುಪ್ತಭಕ್ತರ ವಿಚಾರ ಸಾಧನೆಗಳನ್ನು ತಿಳಿಯುವುದಂತು ದುಸ್ತರ. ಯಾವುದೇ ಮಾಹಿತಿ-ಕೃತಿಗಳನ್ನು ಅವರು ಇತರರಿಗೆ ತಿಳಿಸುವುದಿಲ್ಲ. ಸ್ವಾಂತಸುಖಾಯವಾಗಿಟ್ಟ ಕೊಂಡಿರುತ್ತಾರೆ. ಈ ಬಗೆಯ ಗುಪ್ತಭಕ್ತಿಯ ಹರಿದಾಸಿಣಿ ಡಾ. ನಳಿನಿರಾವ್ ಅವರು ಆಗಿದ್ದರು. ಹಾಗಾಗಿ ಇದುವರೆಗೆ ಅವರು ನೂರಾರು ಕೀರ್ತನೆಗಳನ್ನು ರಚಿಸಿದ್ದರೂ ಅವು ಬಯಲಾಗಿರಲಿಲ್ಲ. ಡಾ. ನಾ.ಗೀತಾಚಾರ್ಯರ ಆತ್ಮೀಯ ಒತ್ತಾಸೆಯಿಂದ ಈಗ ಪ್ರಕಟ ವಾಗುತ್ತಿರುವುದು (ಭಾಗಶಃ) ಸಂತೋಷದ ಸಂಗತಿ ಆಗಿದೆ.

ಡಾ. ನಾ.ಗೀತಾಚಾರ್ಯರಿಗೆ ದೊರಕಿರುವ ಡಾ. ನಳಿನಿರಾವ್ ಅವರ ಹಸ್ತಪ್ರತಿ ಸಾಹಿತ್ಯದಲ್ಲಿ ದ್ವಾದಶನಾಮಗಳ ಒಂದೊಂದು ಹೆಸರಿಗೂ ೬ ಚರಣಗಳ ೨೪ ನುಡಿಗಳುಳ್ಳ 'ಶ್ರೀಮನ್ನಾರಾಯಣ ನಾಮಾವಳಿ' ಕೃತಿ, ೩೮ ಚೌಪದಿಗಳ ಸ್ಯಮಂತಕೋಪಾಖ್ಯಾನ, ತ್ಯಾಗರಾಜರ ಕೃತಿಗಳಲ್ಲಿ ಕಂಡುಬರುವ ನಾಮಗಳನ್ನು ಆಧರಿಸಿ ರಚಿಸಿರುವ 'ಶ್ರೀರಾಮನಾಮಾವಳಿ', ಪುರಂದರದಾಸರ ಕೀರ್ತನೆಗಳಲ್ಲಿ ಕಂಡುಬರುವ ನಾಮಗಳನ್ನು ಆಧರಿಸಿ ರಚಿಸಿರುವ 'ವಿಷ್ಣುಸಹಸ್ರನಾಮ', ಪ್ರತಿ ಅವತಾರಕ್ಕೂ ೧೦-೧೫ ಕೀರ್ತನೆಗಳುಳ್ಳ, ದಶಾವತಾರ ಕೀರ್ತನಮಾಲಾ ಮುಂತಾದ ಕೃತಿಗಳೂ ಹಲವಾರು ಕೀರ್ತನೆಗಳೂ ದೂರಕಿವೆ. ಇವುಗಳನ್ನು, ಕಂಡಾಗ ನಳಿನಿ ಅವರು ವಿಶಿಷ್ಟ ಹರಿದಾಸ ಕೃತಿಗಳನ್ನು ರಚಿಸಿದ್ದಾರೆ ಎಂದು ತಿಳಿದುಬರುತ್ತದೆ.

ಪ್ರಸ್ತುತ ವಾಸುದೇವಾರ್ಯ ಗುರು ಕೀರ್ತನೆಗಳ ಈ ಪುಟ್ಟ ಗ್ರಂಥದಲ್ಲಿ ಶ್ರೀವಾಸುದೇವ ಮಹಿಮಾ ಸ್ತೋತ್ರ ವೆಂಬ ೨೫ ಚೌಪದಿಗಳ ಪ್ರತಿನುಡಿಗೂ ಅರ್ಥ-ವಿವರಣೆ ನೀಡಿ ವ್ಯಾಖ್ಯಾನಕಾರರೂ ಆಗಿ ಕೀರ್ತನೆಗಳನ್ನು ರಚಿಸಿದ್ದಾರೆ. ಇದರ ಜತೆಗೆ ಗುರುಗಳನ್ನು ಕುರಿತು

ರಚಿಸಿರುವ ೭ ಕೀರ್ತನೆಗಳು ಸೇರ್ಪಡೆ ಆಗಿವೆ. ಇದು ಕನ್ನಡದಲ್ಲಿ ಅದ್ವೈತ ಹರಿದಾಸಿಣಿ ಯೊಬ್ಬರು ಕುಲಗುರುಗಳನ್ನು ಕುರಿತು ರಚಿಸಿರುವ ಕೀರ್ತನೆಗಳ ಏಕೈಕ ಕೃತಿಯಾಗಿದೆ. ಅಷ್ಟೇ ಅಲ್ಲದೆ ಯಾವ ಹರಿದಾಸಿಣಿಯರ, ಗುರುಗಳನ್ನೇ ಕುರಿತ ಕೀರ್ತನಗ್ರಂಥ ಇದುವರೆಗೆ ನನಗೆ ತಿಳಿದಂತೆ ಪ್ರಕಟವಾಗಿಲ್ಲ.

ಇನ್ನು ಕೀರ್ತನೆಗಳ ಬಗ್ಗೆ ಒಂದೆರಡು ಮಾತುಗಳನ್ನು ಹೇಳುವುದು ಅಗತ್ಯವಿದೆ.

ಶ್ರೀ ಗುರುಚರಿತೆ ಎಂಬ ದೀರ್ಘಕೀರ್ತನೆಯಲ್ಲಿ ೨೬ ನುಡಿಗಳಿವೆ, ಭೈರವಿರಾಗದಲ್ಲಿ ಅದಿತಾಳದಲ್ಲಿ ರಚಿತವಾಗಿದೆ.

'ಗಣಪ ಸರಸತಿಯರೊಲುಮೆಯ ಬಲುಮೆ ನೀಡೆನುತ
ಕಣಕಣದೆ ಹುರುಡಿಕ್ಕಿ ಹರಸಿ ಹರಹಿಲಿ ಪೇಳ್ವೆ'

ಎಂದು ಪಲ್ಲವಿಯೊಡನೆ ಪ್ರಾರಂಭವಾಗುವ ಈ ಕೀರ್ತನೆ ಚೌಪದಿರಚನೆಯನ್ನು ಒಳಗೊಂಡಿದೆ. ೫ ಮಾತ್ರೆಗಳ ೪ ಗಣಗಳನ್ನು, ಆದಿಪ್ರಾಸವನ್ನು, ಅಂತ್ಯಪ್ರಾಸವನ್ನು ಒಳಗೊಂಡಿದೆ. ಅಲ್ಲಲ್ಲಿ ಒಂದೆರಡು ಕಡೆ ಆದಿ, ಅಂತ್ಯ ಪ್ರಾಸಗಳು ತಪ್ಪಿದೆ.

ಉದಾ: ದೃಢದ ಕೊರಡು ಕರಗಿ ಘನಕಳೆದು ಕಿರಿದಾಯ್ತು
ವೆಂಕಟನೆ ಜಡ ಜೀವವೆಂದಿಗಿದ ಕೊನೆಗೊಳಿಪೆ ಹರಿ ಎಂದು

ಪಾವನದ ಸಂಕ್ರಮಣ ಕಾವೇರಿ ಸ್ನಾನಫಲ
ಕಾ ವಿಪ್ರರ್‍ಯಾಚಕವಗ್ಯೆದು ದರ್ಶನವೆರಸಿ *(ನುಡಿ ೨೦)*

ಮೊದಲಿಗೆ ಮನೆದೇವರು ತಿರುಪತಿ ವೆಂಕಟೇಶನನ್ನು ಸ್ಮರಿಸಿ ಈ ಗುರುಚರಿತೆ ಕಾವ್ಯರಚಿಸುವ ವ್ರತವನ್ನು ಪೂರ್ತಿಗೊಳಿಸು ಎಂದು ಕೇಳಿಕೊಳ್ಳುತ್ತಾ ವಾಸುದೇವಾರ್ಯರ ಅನುಗ್ರಹ ಬೇಡುತ್ತಾರೆ. ಈ ಚರಿತೆ ತನ್ನ ಅಮ್ಮಪ್ಪ (ತಾಯಿಯ ತಂದೆ) ಹೇಳಿದ್ದು, ಅದನ್ನೇ ನಾನು ಹೇಳುತ್ತಿರುವೆ. ನನಗೆ ತಿಳಿದದ್ದನ್ನು ಹೇಳುತ್ತೇನೆ ಎಂದು ಆರಂಭಿಸುತ್ತಾರೆ.

ಒಂದು ದಿನ ವಾಸುದೇವಾರ್ಯರ ಗುರುಗಳು ಪಿತೃಶ್ರಾದ್ಧ ಕಾರ್ಯನಿಮಿತ್ತ ಶಿಷ್ಯನಿಗೆ ಬಾಳೆಎಲೆಯನ್ನು ಗೌಡನ ತೋಟದಿಂದ ತರಲು ಹೇಳಿದರು. ತೋಟಕ್ಕೆ ಹೋದಾಗ ಅಲ್ಲಿ ಗೌಡ ಇಲ್ಲದಿದ್ದಾಗ ಮತ್ತೆ ಬರಬೇಕಲ್ಲ ಎಂದು ಯೋಚಿಸಿ ಬಾಳೆಸುಳಿಯನ್ನು ಬಿಟ್ಟು ಎಲೆಗಳನ್ನು ಕೊಯ್ದು ತಂದುಕೊಟ್ಟರು. ವಾಸುದೇವಾರ್ಯರು ತೋಟದಲ್ಲಿ ಯಾರೂ ಇರಲಿಲ್ಲ, ಆದರೆ ಮತ್ತೆ ಹೋಗಬೇಕಲ್ಲಾ ಎಂದು ಕೊಯ್ದು ತಂದುದಾಗಿ ತಿಳಿಸಿದರು. ಗುರುಗಳು ಶಿಷ್ಯವಾಸುವನ್ನು ವೇಳೆ ಉಳಿಸಿದ್ದಕ್ಕೆ ಸಂತೋಷಿಸಿದರು. ಗೌಡ ತಾನಿಲ್ಲದಾಗ ಎಲೆಕೊಯ್ದಿದ್ದರೂ ಏನೂ ಭಾವಿಸುವುದಿಲ್ಲ ಎಂದುಕೊಂಡರು. ಆದರೆ ತೋಟಕ್ಕೆ ಬಂದ ಗೌಡನು ವಾಸು ಬಾಳೆ ಎಲೆ ಕತ್ತರಿಸಿ ತೆಗೆದುಕೊಂಡು ಹೋದುದನ್ನು ತಿಳಿದು ಬಂದು ವಾಸುವಿನ ಮೇಲೆ ಬೈಗುಳದ ಮಳೆಯನ್ನೇ ಸುರಿಸಿದನು. ಅದನ್ನು ಮೌನವಾಗಿ ಆಲಿಸಿ "ದಾನಿವೆಂಕಟನಿಧಿಯೆ ಮಾನವನು ಕಾಯೆ ಹರಿ ತಮವ ಕರುಣಿಸು" ಎಂದು ಹರಿಯನ್ನು ನೆನೆಯುತ್ತಾ ಮೂರ್ಛೆ ಹೋದರು. ಆಗ ಗುರುಗಳು ಶಿಷ್ಯನಿಗೆ ನೀರು ಚಿಮುಕಿಸಿ ಎಚ್ಚರಿಸಿದರು. ಬೈದಾಡಿ ಹೋದ ಗೌಡನಿಗೆ ಸದ್ಬುದ್ಧಿಕೊಡು ಹರಿಯೆ ಎಂದು ಪ್ರಾರ್ಥಿಸಿದರು. ಇತ್ತ ಗೌಡನು ತೋಟಕ್ಕೆ ಬಂದಾಗ

ಕತ್ತರಿಸಿದ ಬಾಳೆಗಿಡದ ಭಾಗಗಳೆಲ್ಲ ನಳಿನಳಿಸುತ್ತಿದ್ದುದನ್ನು ಕಂಡನು, ಆಗ ತನ್ನತಪ್ಪಿಗೆ ಮರುಗಿ ಪುನಃಗೌಡನು ಬಂದು ತಿಳಿಯದೆ ಬೈದಾಡಿದೆ ಕ್ಷಮಿಸಿ ಎಂದು ಕೇಳಿಕೊಂಡನು. "ಬಣ್ಣ ಬಣ್ಣದ ಹರಿತ ಕಂದು ಗೊನೆಬಾಳೆಗಳ ಕಣ್ಣಿಗೆರಚುತ ನಿಂದು ತಿಣ್ಣಗೆಡಿಸಿತು ಮನವ" ಎಂದು ಹೇಳಿದಾಗ ಗುರುಗಳು ಕ್ಷಮಿಸಿದರು.

ಅನಂತರ ಗುರುಗಳು ಶಿಷ್ಯ ವಾಸುದೇವಾರ್ಯನಿಗೆ ಮದುವೆ ಮಾಡಿದರು. ಅನುಕೂಲ ಸತಿಯೊಡನೆ ವಾಸುದೇವಾರ್ಯ ಗುರುಗಳು ಸೇವೆ ಮಾಡಿಕೊಂಡಿದ್ದರು. 'ಬಡತನದ ಬೇಗೆಯಲಿ ಬಸವಳಿದ ಗುರುಸತಿಯು ಶ್ರೀಹರಿಗೆ ಮೊರೆಯಿಟ್ಟಳು, 'ಜಡಜೀವವೆಂದಿಗಿದ ಕೊನೆಗೊಳಿಪೆ ಹರಿ' ಎಂದು ಕೊರಗಿದಳು. ಆಗ ಶ್ರೀಹರಿ ಅವರ ಮೊರೆಗೆ ಬಂದು ಸೌಭಾಗ್ಯ ಸಂಪತ್ತಿನ ಮಳೆ ಸುರಿಯಿತು. ಅದರಿಂದ ಅಚ್ಚರಿಗೊಂಡ ಅವರು ಶ್ರೀಹರಿ ಸೇವೆಗೇ ಹಿಂತಿರುಗಿಸಿದರು. ಹೀಗಿರುವಾಗ ವಾಸುದೇವಾರ್ಯರ ಖ್ಯಾತಿಕೇಳಿ ಸಂಕ್ರಮಣ ಸ್ನಾನಕ್ಕೆ ಕಾವೇರಿತೀರಕ್ಕೆ ಬಂದ ಬ್ರಾಹ್ಮಣರಿಬ್ಬರು ಅವರ ಬಳಿ ಬಂದು ತೀರ್ಥಯಾತ್ರೆಗೆ ಧನಸಹಾಯ ಮಾಡಬೇಕೆಂದು ಕೋರಿದರು.

ಶ್ರೀಹರಿಕೊಟ್ಟ ಭಾಗ್ಯವನ್ನು ಶ್ರೀ ಹರಿಗೇ ಒಪ್ಪಿಸಿದ್ದರಿಂದ ಕೊಡಲು ಮನೆಯಲ್ಲಿ ಏನೂ' ಇರಲಿಲ್ಲ. ಆಗ ಗುರು ದೇವಗೃಹ ಹೊಕ್ಕು ಧ್ಯಾನಿಸಲು ಶ್ರೀಹರಿಯ ಕರುಣೆಯಿಂದ ಗಂಗಾಕಾವೇರಿ ಪ್ರವಾಹ ಗುರುಗಳ ಮನೆಯ ಹಿತ್ತಲಿಗೇ ಹರಿದು ಬಂದಿತು. ಈ ಅಚ್ಚರಿಯನ್ನು ಕಂಡ ಬ್ರಾಹ್ಮಣರು ನೆಲದೊಳಗೆ ಕಾರಂಜಿಯಾಗಿ ಉಕ್ಕಿದ ಆ ಜಲದಲ್ಲಿ ಮಿಂದು ಪುನೀತರಾಗಿ ಗುರುಗಳಿಗೆ ಸಾಷ್ಟಾಂಗ ವಂದಿಸಿದರು. 'ಕಲುಷಹರ ನೀನೆ ವೆಂಕಟಸಖನು' ಎಂದು ಹೊಗಳಿದರು.

ದೇಹಪೋಷಣೆಗಾಗಿ ಎಂದೂ ಚಿಂತಿಸದೆ ಅರಿಷಡ್ವರ್ಗಗಳನ್ನು ಅಷ್ಟಮದಗಳನ್ನು ನಿಗ್ರಹಿಸಿ ದೇವನು ಎದೆಯೊಳಿಟ್ಟು ಭಜಿಸಿದ ದಿಟ್ಟಯೋಗಿ ವಾಸುದೇವಾರ್ಯರು. ಆಲದಮರ ಆಶ್ರಯ ನೀಡುವಂತೆ ವಂಶದಲಿ ಜನಿಸಿದವರಿಗೆ ಎಲ್ಲ ರೀತಿಯ ಭಾಗ್ಯಗಳನ್ನು ಕರುಣಿಸಿದರು. ಪರಿಣಾಮವಾಗಿ ಈ ದಾಸ ಪೀಳಿಗೆಯಲ್ಲಿ ಅನೇಕರು ಭಗವದ್ಭಕ್ತರಾಗಿ ಲೋಕಮಾನ್ಯರಾದರು. ಹೀಗೆ, ಲೇಖಕಿ ನಳಿನಿರಾವ್ ಅವರು ಮಾತಾಮಹನಜ್ಜನಜ್ಜನತಾತ (ತಾಯಿಯ ತಂದೆಯ ತಾತನ ತಾತನ ತಂದೆ) ವಾಸುದೇವಾರ್ಯರು ಬಂದ ಕಷ್ಟಗಳನ್ನು ಸಹಿಸಿ ತಮ್ಮ ಮಹಿಮೆಯಿಂದ ಭಕ್ತರನ್ನು ಸಲಹಿಸಿದರು, ಇಂಥ ಗುರುವಂಶದಲ್ಲಿ ತಾನು ಜನಿಸಿದ್ದು ಸುಕೃತದಫಲ, ನನ್ನನ್ನು ಜೀವನದ ಸಂಜೆಯಲ್ಲಿ ವೆಂಕಟರಮಣನ ಧ್ಯಾನದಲ್ಲಿ ನಿರತಳಾಗಿರುವಂತೆ ಮಾಡಿದರು, ಅವರು ಭಕ್ತಿಗೆ ಎಷ್ಟು ಸುಲಭರೋ ಅನುಗ್ರಹಕ್ಕೆ ಅಷ್ಟೇ ದುರ್ಲಭರಾದವರು ಎಂದು ವರ್ಣಿಸಿದ್ದಾರೆ.

ಹೀಗೆ ಸರಳವಾಗಿ ಪವಾಡಸದೃಶ ಘಟನೆಯುಳ್ಳ ವಾಸುದೇವಾರ್ಯರ ಜೀವನವನ್ನು ಈ ಕೀರ್ತನೆಯಲ್ಲಿ ನಿರೂಪಿಸಿದ್ದಾರೆ. ಸರಳ ಕಥನಗೀತವಾಗಿರುವ ಈ ಕೀರ್ತನೆಯಲ್ಲಿ ಅಲ್ಲಲ್ಲಿ ಅಸ್ಪಷ್ಟತೆಯಿದ್ದರೂ ಕೀರ್ತನಕಾರ್ತಿ ಅವರೇ ಕೊಟ್ಟಿರುವ ವಿವರಣೆ ಟಿಪ್ಪಣಿಯಿಂದ ಕಥಾಸರಣಿ ಸ್ಪಷ್ಟಗೊಳ್ಳುತ್ತದೆ.

ಇನ್ನು ಬಿಡಿ ಕೀರ್ತನೆಗಳು ೭ ಇವೆ, ಇವೆಲ್ಲವು ರನ್ನನ ಗುರುಸ್ತುತಿಗಳೇ ಆಗಿವೆ. ಗುರು ನಿಮ್ಮ ಸ್ಮರಣೆಯ ವರವಿತ್ತುಕಾಯೋ ಎಂಬ ಕೀರ್ತನೆಯಲ್ಲಿ,

ಅಂಧಕಾರದಿ ಮಂದ ಮೌಢ್ಯಾಹಂಕಾರದಿ
ಚೆಂದ ಸಂದಿತು ಕಾಲ ಸಂದ್ಯೇಲಿ ನಿಂದೆನ್ನ
ಕುಂದನ್ನ ಕಡೆಗಣಿಸಿ ಕಂದನೆನ್ನುತ ತಂದೆ
ನೊಂದು ನಿಂದಿಹ ಜೀವವೆಂದು ದಡಕಿಡೊ ಮುಂದೆ

ಎಂದು ಪ್ರಾರ್ಥಿಸಿದ್ದಾರೆ. ಇಡೀಬಾಳನ್ನೆಲ್ಲ ಹರಿಸ್ಮರಣೆ ಗುರುಸ್ಮರಣೆ ಇಲ್ಲದೆ ಅಜ್ಞಾನದ ವಾದ, ಮೌಢ್ಯ, ಅಹಂಕಾರಗಳಲ್ಲಿ ಬಾಳು ಸಂದುಹೋಗಿ ಬಾಳಿನ ಸಂಜೆಯಲ್ಲಿ ಬಂದು ನಿಂತಿದ್ದೇನೆ, ನನ್ನ ಈ ಅಪರಾಧವನ್ನು ಮನ್ನಿಸಿ, ನಾನು ಏನೂ ತಿಳಿಯದ ಶಿಶು ಎಂದು ತಿಳಿದು ನೊಂದು ಬೆಂದ ಈ ಜೀವವನ್ನು ದಡ ಸೇರಿಸೊ ಎಂದು ಪ್ರಾರ್ಥಿಸಿದ್ದಾರೆ. ಬಾಲ್ಯ-ಯೌವನ ಕಳೆದು ವಾರ್ಧಕ್ಯದಲ್ಲಿ ಅಧ್ಯಾತ್ಮದತ್ತ ಕೀರ್ತನಕಾರ್ತಿ ಚಿತ್ತ ಹರಿಸಿದ್ದನ್ನು ನೆನೆದು ಇದನ್ನು ಹಾಡಿದ್ದಾರೆ.

ಗುರುವಾಸುದೇವನ ಚರಣಾರವಿಂದದಲಿ ಎಂಬ ಕೀರ್ತನೆಯಲ್ಲಿ ಗುರುಗಳು ಇಲ್ಲವೆಂದು ಕಾಲವಾದರು ಎನ್ನಲಾಗುವುದಿಲ್ಲ. "ಇಲ್ಲವಾಗರು ಅವರು ಎಲ್ಲಬಲ್ಲವನ ವೆಂಕಟಪತಿ ಸಲ್ಲುವರು ಅವನೊಳಗೆ ನಿಲುವರು ಎರಗಿದರೊಳಗೆ" ಎಂದು ಅವರನ್ನು ಶಾಶ್ವತರೂಪರು ಎಂದು ತಿಳಿದಿದ್ದಾರೆ.

ಅಂಧನಾದೆನು ಬಂಧು ಬಾಂಧವ । ಬಂಧನದ ದುಮ್ಮಾನ ಜನ ಧನ।
ನಂದಿ ಜಡತನ ಕಂದಿ ನಿನ ನೆಲೆ । ಯಂದವರಿಯದ ಮಂದಮತಿಯನು।
ಮನ್ನಿಸೆನ್ನ ಅಪರಾಧ ಸಂಚಯ । ಮುನ್ನ ಮಾಡಿದನುಚಿತವಕ್ಷಯ।
ಇನ್ನು ಮಾಡದ । ಬಂಧ ನೀತಿಯ । ನಿನ್ನದಾಗಿಸಿ ಒಪ್ಪಿಸಿಕೊಳ್ಳೆಯ

ಎಂದು ತಪ್ಪೊಪ್ಪಿನ ನಮನಮಾಡಿದ್ದಾರೆ. ಮತ್ತೊಂದು ಕೀರ್ತನೆಯಲ್ಲಿ, ಮೂರು ಮಕ್ಕಳ ವರವನಿತ್ತೆ ಎಂಬ ಕೀರ್ತನೆಯಲ್ಲಿ ಮನ, ಬುದ್ಧಿ, ಅಂತಃಕರಣವೆಂಬ ಮೂರು ಮಕ್ಕಳನ್ನು ಕೊಟ್ಟು ಮಾಯೆ, ಭ್ರಮೆ, ಅಹಂಕಾರವೆಂಬ ಕಂಟಕಗಳನ್ನು ಕೊಟ್ಟಿರುವೆ. ಈ ಜೀವ ಅದನ್ನು ತಡೆದುಕೊಳ್ಳಲಾರದು ಲಘುಜೀವ. ಇದಕ್ಕೆ ಚಿತ್ತಸ್ವಾಸ್ಥ್ಯ ಕೊಡು ಎಂದು ಪ್ರಾರ್ಥಿಸಿದ್ದಾರೆ.

ಮೂರು ಮಕ್ಕಳ ವರವನಿತ್ತುಪಕರಿಸಿ ಭವ-
ಭಾರದಲಿ ತಂದ ಮನ, ಬುದ್ಧಿ, ಅಂತಃಕರಣವಿರಿಸಿ
ಧರಿಸದೆ ಮಾಯೆ ಭ್ರಮೆ ಅಹಂಕಾರವಿರಿಸಿದೆ
ಕರಣ ಕಾರಣ ವೆಂಕಟನೆ ಬಾಳ ಹದಗೊಳಿಸು
ಗುರು, ಚಿತ್ತಸ್ವಾಸ್ಥ್ಯ ಕಳೆದೀ ಲಘುಜೀವ ಹರಸು

ನಳಿನಿರಾವ್ ಅವರು ಸ್ವನಾಂಕಿತವಾದ ತಮ್ಮ ಮನೆದೇವರಾದ ತಿರುಪತಿ ವೆಂಕಟೇಶನನಾಮದ 'ವೆಂಕಟಪತಿ' 'ಗುರುವೆಂಕಟ' ಎಂಬ ಅಂಕಿತದಲ್ಲಿ ಕೀರ್ತನೆಗಳನ್ನು ರಚಿಸಿದ್ದಾರೆ. ವಾಸುದೇವಾರ್ಯರನ್ನು ನೆನೆದರೂ ಅಂಕಿತದಲ್ಲಿ ಕುಲದೈವವಿರುವುದನ್ನು ಗಮನಿಸಬೇಕು.

ಸ್ಮರಣಭಕ್ತಿಯಲ್ಲಿ ಗುರುವನ್ನು ನೆನೆದು ಸುಖಿಸಬೇಕು, ಪ್ರತ್ಯಕ್ಷವಾಗಿ ಭೌತಿಕವಾಗಿ ಗುರು ಇಲ್ಲದಿದ್ದರೂ ನಷ್ಟವಿಲ್ಲ ಎನ್ನುವ ಈ ಭಕ್ತೆ

ನೆನೆದು ಹರಿಗುರುಚರಣ ಸುಖವ ಸಾಕ್ಷಾತ್ಕರಿಸು
ನೆನೆಸಿ ಮನವನು ದಿವ್ಯನಾಮದಲಿ ಪಿರಿದಾಗಿ

ಎಂದು ಹೇಳಿದ್ದಾರೆ. ದಾಸ್ಯಭಕ್ತಿಯ ೬ನೇ ಕೀರ್ತನೆಯಲ್ಲಿ

ದಾಸರು ಬಂದರು ನೋಡಿ । ಹರಿ ।
ಸಾಸಿರಶೀರ್ಷನ ಭಕ್ತಿಯ ಮಾಡಿ ಸು
ಭಾಸುರ ಬುಧರಲಿ ವಾದಗಳಾಡಿದ

ಎಂದು ಪಲ್ಲವಿ, ಅನುಪಲ್ಲವಿ ನಂತರ ಮೊದಲ ನುಡಿಯನ್ನು ಶಂಕರಾಭರಣದಲಿ ರಚಿಸಿ, ಮುಂದಿನ ೪ ನುಡಿಗಳನ್ನು ಅಠಾಣ, ಖಮಾಚ್, ಭೈರವಿ, ಮಧ್ಯಮಾವತಿ ರಾಗಗಳಲ್ಲಿ ರಚಿಸಿದ್ದಾರೆ. ಪಂಚರಾಗದಸ್ತುತಿ ಒಂದು ವಿಶೇಷ ಕೀರ್ತನೆ ಆಗಿದೆ. ನವರಾಗಮಾಲಿಕೆ ಕೃತಿಗಳಂತೆ ಪಂಚರತ್ನ ಕೃತಿಗಳನ್ನು ತ್ಯಾಗರಾಜರು ರಚಿಸಿರುವುದರ ಪ್ರಭಾವವನ್ನು ಇಲ್ಲಿ ಗುರುತಿಸಬಹುದು. ಹರಿದಾಸರ ಕೃತಿಗಳ ಜತೆಗೆ ತ್ಯಾಗರಾಜರ ಕೃತಿಗಳನ್ನೂ ವಿಶೇಷವಾಗಿ ಇವರು ಅಧ್ಯಯನ ಮಾಡಿದುದರ ದ್ಯೋತಕವಾಗಿದೆ ಈ ಕೀರ್ತನೆ.

ಏಳನೆಯ ಕೀರ್ತನೆಯಲ್ಲಿ ಈಕೆ ಶಿಕ್ಷಕಿ ಆಗಿದ್ದರಿಂದ ಆ ಹಿನ್ನೆಲೆಯಲ್ಲಿ ಪಾಠಶಾಲೆ ನನ್ನ ಗುರುಮನೆ ಎಂಬ ಕೀರ್ತನೆ ರಚಿಸಿದ್ದಾರೆ.

ಪಾಠಶಾಲೆಯು ನನ್ನ ಗುರುಮನೆ
ಆಟವಾಡಿಸಿ ತೋರುವೆ
ಆಟವದರೊಳು ವಿದ್ಯೆ ಬಹು ನಯ
ಆಟವಳಿಸುತ ಮುಗಿಸುವೆ

ಹೀಗೆ ಗುರುವಂದನ, ಗುರುಸ್ಮರಣೆ, ಗುರುಕಥನ, ಗುರುನಮನ, ಗುರುಕ್ಷಮಾ ಪ್ರಾರ್ಥನ, ದಾಸಭಕ್ತಿ ಪಾದಸೇವನಾಭಕ್ತಿಗಳ ಮೂಲಕ ಗುರುಕೀರ್ತನೆಗಳನ್ನು ವೆಂಕಟಪತಿ ಅಂಕಿತದ ನಳಿನಿರಾವ್ ಅವರು ರಚಿಸಿ ಕನ್ನಡಕ್ಕೆ ವಿನೂತನ ಕೊಡುಗೆ ನೀಡಿದ್ದಾರೆ. ವಾಸುದೇವ ಮಹಿಮಾ ಗ್ರಂಥ ಗುರುಕಾಣಿಕೆಯ ಗ್ರಂಥವಷ್ಟೇ ಅಲ್ಲ, ಕನ್ನಡದಲ್ಲಿ ಗುರುಕೀರ್ತನೆಗಳ ವಿಶಿಷ್ಟ ಗ್ರಂಥವಾಗಿದೆ. ಇಂಥ ಗ್ರಂಥವನ್ನು ಬೆಳಕಿಗೆ ತಂದ ನಾ. ಗೀತಾಚಾರ್ಯರಿಗೆ ಎಲ್ಲರ ಕೃತಜ್ಞತೆ ಸಲ್ಲಬೇಕು.

■ ಪ್ರೊ. ಜಿ. ಅಶ್ವತ್ಥನಾರಾಯಣ

# ಲೇಖಕರ ವಿಳಾಸಗಳು


ಸಂಪಾದಕರು:

**ಪ್ರೊ. ಜಿ. ಅಬ್ದುಲ್ ಬಷೀರ್**
ನಿವೃತ್ತ ಕನ್ನಡ ಪ್ರಾಧ್ಯಾಪಕರು,
ನಂ.೫, ೮ನೆಯ ಅಡ್ಡರಸ್ತೆ,
ಬೈರಸಂದ್ರ, ಜಯನಗರ,
೧ನೆಯ ಬಡಾವಣೆ,
ಬೆಂಗಳೂರು – ೫೬೦ ೦೧೧.
ದೂರವಾಣಿ : ೯೦೦೮೭೬೩೩೩೬

ಲೇಖಕರು:

೧. **ಡಾ. ಉಪ್ಪಂಗಳ ಶಂಕರನಾರಾಯಣಭಟ್**
ನಿವೃತ್ತ ಕನ್ನಡ ವಿದ್ಯಾಭ್ಯಾಸದ ಉಪನಿರ್ದೇಶಕರು,
ಚಿನ್ಮಯಾ ಕಾಲೋನಿ,
ವಿದ್ಯಾನಗರ ಅಂಚೆ – ೬೭೧೧೨೩
ಕಾಸರಗೋಡು.

೨. **ಡಾ.ಕೆ.ಜಿ. ವೆಂಕಟೇಶ್ ಜೋಯಿಸ್**
ಕ್ಯುರೇಟರ್, ಕೆಳದಿ ವಸ್ತುಸಂಗ್ರಹಾಲಯ,
ಕುವೆಂಪು ವಿಶ್ವವಿದ್ಯಾಲಯ,
ಕೆಳದಿ – ೫೭೭ ೪೦೧. ಸಾಗರ ತಾಲ್ಲೂಕು.

೩. **ಶ್ರೀ ಮು. ಹಾಲಪ್ಪ**
ಸಂಶೋಧನ ವಿದ್ಯಾರ್ಥಿ
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ,
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ,
ಎನ್.ಆರ್. ಕಾಲೋನಿ,
ಬೆಂಗಳೂರು – ೫೬೦ ೦೧೯.

೪. **ದಿ.ಪ್ರೊ.ಟಿ. ಕೇಶವ ಭಟ್ಟ**
ನಂ.೭೫೪, 'ಶ್ರೀವರ್ಧನ',
೧೫ನೆಯ ಮುಖ್ಯರಸ್ತೆ,
ಬನಶಂಕರಿ, ೨ನೆಯ ಹಂತ,
ಬೆಂಗಳೂರು – ೫೬೦೦೭೦.

೫. **ಶ್ರೀ ನಾಗರಾಜ ಹೊಸೂರಕರ**
ಸಂಸ್ಕೃತ ಉಪನ್ಯಾಸಕರು,
ವಿಜಯ ಸಂಯುಕ್ತ ಪದವಿ
ಪೂರ್ವ ಕಾಲೇಜು,ಜಯನಗರ,
ಬೆಂಗಳೂರು – ೫೬೦ ೦೧೧

೬. **ಡಾ. ಪಿ.ವಿ. ಕೃಷ್ಣಮೂರ್ತಿ**
ನಂ.೩೭, 'ಶ್ರೀಕೃಷ್ಣ ಕೃಪ'
೩ನೆಯ ಕ್ರಾಸ್,
ಸುಬ್ಬಣ್ಣ ಲೇಔಟ್, ಹರಿನಗರ ಕ್ರಾಸ್,
ಬೆಂಗಳೂರು – ೫೬೦ ೦೬೨.

೭. **ಎಂ.ಫಿಲ್ ಸಂಶೋಧನ ವಿದ್ಯಾರ್ಥಿ,**
ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ,
ಬಿ.ಎಂ.ಶ್ರೀ ಕಲಾಭವನ,
೩ನೆಯ ಮುಖ್ಯರಸ್ತೆ,
ನರಸಿಂಹರಾಜ ಕಾಲೋನಿ,
ಬೆಂಗಳೂರು – ೫೬೦ ೦೧೯.

೮. **ಪ್ರೊ.ಕೆ.ಎಸ್. ಮಧುಸೂದನ**
ನಿವೃತ್ತ ಪ್ರಿನ್ಸಿಪಾಲರು,
ಶೇಷಾಂಕ ೧೫೫, ವೈ,
೩ನೆಯ ಮುಖ್ಯರಸ್ತೆ,
೭ನೆಯ ಬಡಾವಣೆ, ೪ನೆಯ ಫೇಸ್,
ಬಿಎಸ್‌ಕೆ ೩ನೆಯ ಹಂತ,
ಬೆಂಗಳೂರು – ೫೬೦ ೦೮೫

೯. **ಪ್ರೊ.ಕೆ.ಎಸ್. ನಿಸಾರ್ ಅಹಮದ್**
'ಹಮೀದಾ ಹೈದರ್', ನಂ.೩೪೧,
ಪದ್ಮನಾಭನಗರ, ಬನಶಂಕರಿ
೨ನೆಯ ಹಂತ,
ಬೆಂಗಳೂರು – ೫೬೦ ೦೭೦.

೧೦. **ಡಾ.ಎಸ್.ವಿ . ಪ್ರಭಾವತಿ,**
ನಂ.೩೦೧, ಪಲ್ಲವಾಟೆರೇಸ್,
ಜಯನಗರ, ೬ನೆಯ ಬ್ಲಾಕ್,
ಬೆಂಗಳೂರು – ೫೬೦ ೦೭೦.

೧೧. **ಪ್ರೊ. ಜಿ. ಅಶ್ವತ್ಥನಾರಾಯಣ,**
ನಂ.೯೫, ೩೪ಬಿ ಕ್ರಾಸ್,
೧೬ನೆಯ ಮೇನ್,
೪ನೆಯ 'ಟಿ' ಬ್ಲಾಕ್, ಜಯನಗರ,
ಬೆಂಗಳೂರು – ೫೬೦ ೦೪೧.


❒

# ಕರ್ನಾಟಕ ಲೋಚನ

ಷಾಣ್ಮಾಸಿಕ ವಿದ್ವತ್ ಪತ್ರಿಕೆ

## ನಮ್ಮ ಲೇಖಕರು

ಡಾ. ಉಪ್ಪಂಗಳ ಶಂಕರನಾರಾಯಣಭಟ್
ಡಾ. ಕೆ.ಜಿ. ವೆಂಕಟೇಶ್ ಜೋಯಿಸ್
ಮು. ಹಾಲಪ್ಪ
ದಿ. ಪ್ರೊ. ಟಿ. ಕೇಶವಭಟ್ಟ
ಪ್ರೊ. ಜಿ. ಅಬ್ದುಲ್ ಬಷೀರ್
ನಾಗರಾಜ ಹೊಸೂರಕರ
ಡಾ. ಪಿ.ವಿ. ಕೃಷ್ಣಮೂರ್ತಿ
ಎಂ.ಫಿಲ್ ಸಂಶೋಧನ ವಿದ್ಯಾರ್ಥಿ
ಪ್ರೊ. ಕೆ.ಎಸ್. ಮಧುಸೂದನ
ಪ್ರೊ. ಕೆ.ಎಸ್. ನಿಸಾರ್ ಅಹಮದ್
ಡಾ. ಎಸ್.ವಿ. ಪ್ರಭಾವತಿ
ಪ್ರೊ. ಜಿ. ಅಶ್ವತ್ಥನಾರಾಯಣ